# ಚೆನ್ನದಾಸರ ಸಾಹಿತ್ಯ: ಅಲೆಮಾರಿ ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ದಾಸರ ಪ್ರತಿಭಾ

ಮಾರ್ಗದರ್ಶಕರು
ಡಾ. ಚಲುವರಾಜು
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೮

# ಚೆನ್ನದಾಸರ ಸಾಹಿತ್ಯ: ಅಲೆಮಾರಿ ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ದಾಸರ ಪ್ರತಿಭಾ**

ಮಾರ್ಗದರ್ಶಕರು

**ಡಾ. ಚಲುವರಾಜು**

ಪ್ರಾಧ್ಯಾಪಕರು



**ಬುಡಕಟ್ಟು ಅಧ್ಯಯನ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ-೫೮೩ ೨೭೬

೨೦೧೮

# ಮಾರ್ಗದರ್ಶಕರ ದೃಢೀಕರಣ ಪತ್ರ

**ದಾಸರ ಪ್ರತಿಭಾ** ಅವರು ನನ್ನ ಮಾರ್ಗದರ್ಶನದಲ್ಲಿ **'ಚೆನ್ನದಾಸರ ಸಾಹಿತ್ಯ: ಅಲೆಮಾರಿ ಸಂಕಥನ'** ಎಂಬ ಸಂಶೋಧನ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುತ್ತಾರೆ.

ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲ ಎಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಚಲುವರಾಜು**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ :

ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣಪತ್ರ

**ಚೆನ್ನದಾಸರ ಸಾಹಿತ್ಯ: ಅಲೆಮಾರಿ ಸಂಕಥನ** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು **ಡಾ. ಚಲುವರಾಜು,** ಪ್ರಾಧ್ಯಾಪಕರು ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**(ದಾಸರ ಪ್ರತಿಭಾ)**
ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ದಿನಾಂಕ:
ಸ್ಥಳ: ವಿದ್ಯಾರಣ್ಯ

## ಪರಿವಿಡಿ

# ಅಧ್ಯಾಯ : ಒಂದು

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧.೧ ಅಧ್ಯಯನದ ವ್ಯಾಪ್ತಿ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ಸ್ವರೂಪ

೧.೪ ಅಧ್ಯಯನದ ವಿಧಾನ

೧.೫ ಚೆನ್ನದಾಸ ಸಮುದಾಯದ ಇದುವರೆಗೆ ನಡೆದ ಅಧ್ಯಯನಗಳು

# ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

**ಪೀಠಿಕೆ**

ಈ ಹಿಂದಿನ ಸಾವಿರಾರು ವರ್ಷಗಳಲ್ಲಿ ಮನುಕುಲ ವಿಕಸನದ ಹಲವು ಮಜಲುಗಳನ್ನು ಕಂಡಿರುವ ಕರ್ನಾಟಕವು ಐತಿಹಾಸಿಕವಾಗಿ ಹಲವಾರು ಧರ್ಮ ಪರಂಪರೆಗಳ ಹುಟ್ಟಿಗೆ ಕಾರಣವಾಗಿದೆ. ಮನುಷ್ಯನು ಪ್ರಾರಂಭದಲ್ಲಿ ಒಂದು ಕಡೆ ನೆಲೆ ನಿಂತು ಜೀವನ ಸಾಗಿಸಬೇಕೆಂಬುದು ಯೋಚಿಸಿರಲಿಲ್ಲ. ತನಗೆ ಬೇಕಾದ ಆಹಾರ ನೀರು ಹುಡುಕುತ್ತಾ ಅಲೆಮಾರಿಯಾಗಿದ್ದನು. ಹೀಗೆ ಅಲೆಮಾರಿ ಜೀವನ ನಡೆಸುತ್ತಾ ತನ್ನ ಯೋಚನಾಶಕ್ತಿಯ ಕಲೆಗಳನ್ನು ಕಲಿಯತೊಡಗುವುದರ ಮೂಲಕ ಅವುಗಳನ್ನು ಪೀಳಿಗೆಯಿಂದ ಪೀಳಿಗೆಗೆ ವಿಸ್ತರಿಸಿದ. ಹೀಗೆ ಮನುಷ್ಯನ ಸಂಸ್ಕೃತಿಗೂ ಮತ್ತು ಸಾಹಿತ್ಯಕ್ಕೂ ಅವಿನಾಭಾವ ಸಂಬಂಧವಿದೆ. ಆದಿ ಮಾನವನ ಕಾಲದಿಂದ ಹಿಡಿದು ಆಧುನಿಕ ಕಾಲದ ನಾಗರೀಕ ಮಾನವ ಸಮುದಾಯಗಳಲ್ಲಿ ಸಾಹಿತ್ಯ ಉಳಿದುಕೊಂಡು ಬಂದಿದೆ.

ಭಾಷೆಗೆ ಲಿಪಿ ಕಾಣಿಸಿಕೊಳ್ಳುವ ಪೂರ್ವದಲ್ಲಿ ಮಾನವ ಸಮಾಜದ ಎಲ್ಲಾ ವರ್ತನೆಗಳು ಮೌಖಿಕವಾಗಿ ಅಭಿವ್ಯಕ್ತವಾಗುತ್ತಿದ್ದವು. ಅಲೆಮಾರಿ ಜೀವನ ಸಾಗಿಸುವ ವ್ಯಕ್ತಿ ತಮ್ಮ ಬದುಕಿನ ಕಷ್ಟ–ಕಾರ್ಪಣ್ಯಗಳನ್ನು, ನೋವು– ನಲಿವುಗಳನ್ನು ತಾವು ಮಾತನಾಡುವ ಸರಳ ಭಾಷೆಯಲ್ಲಿ ಹಾಡುವುದರ ಜೊತೆಗೆ ವಯಸ್ಸು ಅಥವಾ ಲಿಂಗತಾರತಮ್ಯವಿಲ್ಲದೆ ಪಾಲ್ಗೊಂಡು ಬಂದಿರುವುದರಿಂದ ಇದು ವ್ಯಕ್ತಿ ನಿಷ್ಠವಾಗಿದ್ದು, ವ್ಯಕ್ತಿಯ ಒಂದು ಅಂಗವಾಗುವುದರ ಮೂಲಕ ಸಮಷ್ಟಿಯ ಪ್ರಜ್ಞೆಯನ್ನು ಹೊಂದಿರುತ್ತದೆ. ಅಲೆಮಾರಿ ಸಾಹಿತ್ಯವು ಲಿಪಿಯಲ್ಲದೆ ತನ್ನ ಕಲೆಗಳ ಮೂಲಕ ಬದುಕಿನ ಸಂದರ್ಭಗಳಲ್ಲಿ ನಡೆದ ಘಟನೆಗಳನ್ನು ಹಾಡುಗಾರಿಕೆಯ ಮೂಲಕ ಹಂಚಿಕೊಂಡಿದ್ದಾರೆ. ಹೀಗೆ ಇದು ನಿರಂತರವಾಗಿ ಚಲನ ಶೀಲತೆಯುಳ್ಳ ಅಲೆಮಾರಿ ಸಾಹಿತ್ಯ ಸಂವಹನ ಮಾಧ್ಯಮವಾಗಿ ಉಳಿದುಕೊಂಡು ಬಂದಿದೆ.

ಜಗತ್ತಿನಾದ್ಯಂತ ಅಲೆಯುವ ಅಲೆಮಾರಿ ಸಮುದಾಯಗಳ ಸಾಹಿತ್ಯವು ತಲೆಮಾರಿನಿಂದ ತಲೆಮಾರಿಗೆ ಸಾಗಿಬರುವ ಪಾರಂಪರಿಕ ಜ್ಞಾನವೂ ಹೌದು. ಇವರ ಸಾಹಿತ್ಯದ ಅಧ್ಯಯನಗಳು ವೆಷ್ಟಿಯಿಂದ ಸಮಷ್ಟಿಯ ಮೂಲಕ ನಿರ್ಮಾಣಗೊಂಡಿರುವುದನ್ನು ಕಾಣುತ್ತೇವೆ. ಕರ್ನಾಟಕದಲ್ಲಿ

ನಡೆದಿರುವ ದೇಶೀಯ ಹಾಗೂ ವಿದೇಶಿಯರ ಜಾನಪದ ಅಧ್ಯಯನಗಳೆಲ್ಲವೂ ಕರ್ನಾಟಕದ ವಿವಿಧ ಪ್ರದೇಶ ಹಾಗೂ ಸಮುದಾಯಗಳನ್ನು ಕುರಿತು ವಿಶೇಷವಾಗಿ ಅಧ್ಯಯನಕ್ಕೆ ಒಳಪಟ್ಟಿರುವುದನ್ನು ಕಾಣಬಹುದು. ಕರ್ನಾಟಕದ ಬಹುಭಾಷಾ ಲೌಖಿಕ ಪರಂಪರೆಯ ಹಾಗೂ ಮಾನವೀಯ ಮೌಲ್ಯಗಳನ್ನು ಸಮಾಜದ ನಡುವೆ ಭಿತ್ತಿ ಬೆಳೆಯುವ ಮೂಲಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಪ್ರಜ್ಞೆಯನ್ನು ಸಮಾಜದಲ್ಲಿ ಭಿತ್ತಿ ಬೆಳೆಸುವುದಕ್ಕೆ ತಮ್ಮ ಜೀವನವನ್ನೇ ಸಮಾಜದ ಸೇವೆ ಹಾಗೂ ಸಾಮಾಜಿಕ ಜಾಗೃತಿಗೆ ಮೂಡಿಪಾಗಿಟ್ಟಿರುವ ಅಲೆಮಾರಿ ಸಮುದಾಯಗಳು ಅತ್ಯಂತ ವಿಶಿಷ್ಟವಾಗಿ ಕಂಡು ಬರುತ್ತಾರೆ. ಇಂತಹ ವಿಶಿಷ್ಟವಾಗಿರುವ ನಿರ್ಲಕ್ಷಿತ ಹಾಗೂ ಸಮಾಜದ ಅತ್ಯಂತ ಕಟ್ಟಕಡೆಯ ಸ್ತರದಲ್ಲಿ ಉಳಿಯುವ ಮೂಲಕ ಎಲೆಮರೆಕಾಯಿಯಂತೆ ಸಾಮಾಜಿಕ, ಧಾರ್ಮಿಕ ಹಾಗೂ ಚಾರಿತ್ರಿಕ ಪ್ರಜ್ಞೆಯನ್ನು ಸಮಾಜದಲ್ಲಿ ಶಾಶ್ವತವಾಗಿ ನೆಲೆಗೊಳಿಸುವ ಕಾರ್ಯದಲ್ಲಿ ತೊಡಗಿರುವ ಈ ಅಲೆಮಾರಿ ಸಮುದಾಯಗಳ ಸಾಹಿತ್ಯ ಅಧ್ಯಯನ ಅತ್ಯಾವಶ್ಯವೆನಿಸುತ್ತದೆ. ಈ ಹಿನ್ನೆಲೆಯಲ್ಲಿ ಅಲೆಮಾರಿ ಸಾಹಿತ್ಯದ ಹೊಸ ಅಧ್ಯಯನ ನೆಲೆಯೊಂದನ್ನು ಕಟ್ಟಿಕೊಟ್ಟಾಂತಾಗುತ್ತದೆ.

### ೧.೧ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಕರ್ನಾಟಕದ ಚೆನ್ನದಾಸ ಸಮುದಾಯದ ಸಾಹಿತ್ಯ ಹಾಗೂ ಅಲೆಮಾರಿಗಳ ಸಂಕಥನದ ಮೇಲೆ ಬೆಳಕು ಚೆಲ್ಲುತ್ತದೆ. ಒಂದು ಸಾಂಸ್ಕೃತಿಕ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ತನ್ನನ್ನು ತಾನು ಪ್ರತ್ಯೇಕ ಅನನ್ಯತೆಯಿಂದ ಹಾಗೂ ವೈಶಿಷ್ಟ್ಯತೆಗಳಿಂದ ಗುರುತಿಸಿಕೊಂಡ ಒಂದು ಸಾಂಸ್ಕೃತಿಕ ನೆಲೆಗಟ್ಟು, ಈ ಪ್ರದೇಶದಲ್ಲಿ ವಚನ ಚಳುವಳಿ, ಹರಿದಾಸ ಚಳುವಳಿ, ಅನುಭಾವಧಾರೆ, ಜ್ಞಾನಧಾರೆ(ಅನುಭಾವಿ ಪಂಥಗಳು), ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ರಾಂತಿಕಾರಿ ಧಾರೆಗಳು ಹುಟ್ಟಿ ಬೆಳೆದವು. ಇಲ್ಲಿ ಹರಿಯುವ ಕೃಷ್ಣ, ಭೀಮ, ತುಂಗಭದ್ರ ನದಿಯ ಪ್ರದೇಶಗಳು ಕರ್ನಾಟಕ ಸಂಸ್ಕೃತಿಯ ಅನನ್ಯ ಕೇಂದ್ರಗಳು ಹಾಗೂ ಈ ಪ್ರದೇಶದಲ್ಲಿ ಉಂಟಾದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು ಈ ಪ್ರದೇಶದ ಅಲೆಮಾರಿ ಸಮುದಾಯಗಳ ಮೇಲೆ ಅತ್ಯಂತ ಮಹತ್ವದ ಪ್ರಭಾವವನ್ನು ಬೀರಿದೆ. ಈ ಪ್ರದೇಶದಲ್ಲಿ ನೆಲೆನಿಂತ ಸಮುದಾಯಗಳಿಂತ ಅಲೆಮಾರಿ ಸಮುದಾಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಅತ್ಯಂತ ವೈಶಿಷ್ಟಪೂರ್ಣವಾಗಿ ಗುರುತಿಸಬಹುದಾಗಿದೆ. ಈ ಎಲ್ಲಾ ಸಾಂಸ್ಕೃತಿಕ ನೆಲೆಗಟ್ಟುಗಳಿಗೂ ಜೀವಂತ ಪರಂಪರೆಯಾಗಿ ಕನ್ನಡ ಹಾಗೂ ತೆಲುಗು ಭಾಷೆಗಳ ಸಂಬಂಧದ ಸೇತುವೆಯಾಗಿ ಸಮಾಜಮುಖಿಯಾಗಿ ಲೌಖಿಕ ಜಗತ್ತಿನ ವಿಚಾರಗಳನ್ನು ಜನಮಾನದಲ್ಲಿ ಭಿತ್ತಿ ಬೆಳೆದ ಹಲವಾರು ಅಲೆಮಾರಿ ಸಮುದಾಯಗಳಲ್ಲಿ ಚೆನ್ನದಾಸರು ಅತ್ಯಂತ ಪ್ರಮುಖರಾಗಿ ಕಂಡುಬರುತ್ತಾರೆ. ಆದ್ದರಿಂದ ನೆಲ, ಸಮಾಜ, ಸಂಸ್ಕೃತಿ ಹಾಗೂ ಚೆನ್ನದಾಸ ಸಮುದಾಯದ ನಡುವಿನ ಈ ಅವಿನಾಭಾವ ಸಂಬಂಧಗಳನ್ನು ಗುರುತಿಸುವ ಮೂಲಕ ಹೈದ್ರಾಬಾದ್ ಕರ್ನಾಟಕ ಪ್ರದೇಶಕ್ಕೆ ಸೀಮಿತವಾಗಿರುವ ಇವರ ಬಗ್ಗೆ ಪ್ರಸ್ತುತ ಅಧ್ಯಯನದ ಕಾರ್ಯ ಕ್ಷೇತ್ರವನ್ನಾಗಿ (ಅಧ್ಯಯನದ ಕ್ಷೇತ್ರ) ಮಾಡಿಕೊಳ್ಳಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ಅಲೆಮಾರಿ ಸಮುದಾಯಗಳ ಜಾನಪದವು ಇತರೆ ಸಮುದಾಯಗಳ ಜನಪದಕ್ಕಿಂತ ಶ್ರೀಮಂತವಾಗಿದೆ. ಅಂದಿನ ಕಾಲದಿಂದ ಇಂದಿನವರೆಗೂ ಸಹ ಮಾನವನು ಅಲೆಮಾರಿ ಜೀವನ ಸಾಗಿಸುತ್ತಿದ್ದಾನೆ ಹಾಗೂ ಹಲವು ಬುಡಕಟ್ಟು ಗಣತಿಯ ವಿಚಾರದಲ್ಲಿ ಆಗಿರುವ ನ್ಯೂನ್ಯತೆ ಅಪಾರವಾದದು. ಎಷ್ಟೋ ಅಲೆಮಾರಿ ಸಮುದಾಯಗಳಿಗೆ ಇಂದಿಗೂ ಹೇಳಿಕೊಳ್ಳಲು ಒಂದು ನಿರ್ದಿಷ್ಟ ನೆಲೆ ಇಲ್ಲ. ಅಲೆಮಾರಿತನವೇ ಬದುಕು ಎನ್ನುವ ಸ್ಥಿತಿಯಲ್ಲಿ ಹಲವಾರು ಅಲೆಮಾರಿ ಕುಟುಂಬಗಳು ಜೀವನೋಪಾಯಕ್ಕಾಗಿ ಇಂದಿಗೂ ಅಲೆದಾಡುತ್ತಲೇ ಇವೆ.

ಒಟ್ಟಿನಲ್ಲಿ ಅಲೆಮಾರಿ ಎಂದರೆ "ಒಂದು ಕಡೆಯಿಂದ ಇನ್ನೊಂದು ಕಡೆ ಸಂಚರಿಸುತ್ತ ಜೀವನ ಸಾಗಿಸುವುದಾಗಿದೆ. ಸಮುದಾಯಗಳ ಭಾಷೆ, ಧರ್ಮಗಳಲ್ಲಿ ಬದ್ಧರಾದ ಒಂದು ಪ್ರಜಾಸಮೂಹದ ಸಮಾಜದ ತಳಸ್ತರ. ಒಟ್ಟಾರೆ ತನ್ನದೆ ಆದ ತಲೆಮಾರಿಗೆ ಉಳಿಸಿಕೊಂಡು ಬಂದ ಸಮೂಹವಾಗಿದೆ." ಇಂತಹ ಅಲೆಮಾರಿ ಸಮುದಾಯದ ಸಾಹಿತ್ಯದ ಉದ್ದೇಶಗಳು ಈ ಕೆಳಗಿನಂತಿವೆ.

೧] ಅಲೆಮಾರಿ ಸಮುದಾಯಗಳ ಜ್ಞಾನ ಪರಂಪರೆ ಹಾಗೂ ಮೌಲ್ಯಗಳನ್ನು ಗುರುತಿಸುವುದು.

೨] ಅಜ್ಞಾತವಾಗಿರುವ ಚೆನ್ನದಾಸ ಸಮುದಾಯದ ಜೀವನ ಮೌಲ್ಯಗಳನ್ನು ಸಂಶೋಧನಾತ್ಮಕವಾಗಿ ಕಟ್ಟಿಕೊಡುವುದು.

೩] ಅಲೆಮಾರಿ ಸಮುದಾಯವು ಕನಿಷ್ಟ ೪ ಭಾಷೆಗಳನ್ನು ತನ್ನ ನಿತ್ಯ ಬಳಕೆಗೆ ಸಂವಹನ ಬಳಕೆಯ ವಾಹಕವಾಗಿಸಿಕೊಂಡಿದೆ. ಇವುಗಳಲ್ಲಿ ಅವರ ಮಾತೃಭಾಷೆ ಯಾವುದು ಎಂಬುದು ಗೊತ್ತಾಗಲಾರದ ಮಟ್ಟಿಗೆ ಅವರಾಡುವ ಭಾಷೆಗಳ ಪ್ರಯೋಗ ಪರಿಣಿತಿ ಅವರಲ್ಲಿ ಪ್ರಬುದ್ಧವಾಗಿದೆ. ಇಂತಹ ಬಹುಭಾಷೆ ಪ್ರಜ್ಞೆವುಳ್ಳರ ಮೌಖಿಕ ಸಾಹಿತ್ಯದ ಅಧ್ಯಯನ ಸೂಕ್ತವಾಗಿದೆ.

೪] ಅಲೆಮಾರಿ ಸಮುದಾಯದವರಿಂದಲೇ ಅವರ ಸಮುದಾಯದ ಮುಖವಾಣಿಯಾಗಿ ಅವರಲ್ಲಿಯೇ ಹುಟ್ಟಿ ಪ್ರಚಲಿತದಲ್ಲಿರುವ ಸಾಹಿತ್ಯ ಸಂಪಾದಿಸುವುದು.

೫] ಚೆನ್ನದಾಸ ಸಮುದಾಯದ ಸಾಮಾಜಿಕ ಹಾಗೂ ಸಮುದಾಯದ ಅಂತಃಸತ್ವವನ್ನು ಅವರ ಮೌಖಿಕ ಸಾಹಿತ್ಯದ ಮೂಲಕ ಅರ್ಥೈಹಿಸುವುದು.

೬] ಈ ಸಮುದಾಯದ ಮರೀಚಿಕೆಯಾಗುತ್ತಿರುವ ತತ್ವಪದ ಸಾಹಿತ್ಯವನ್ನು ಸಂಗ್ರಹಿಸುವುದು.

೭] ಸಾಹಿತ್ಯ ಕಾರ್ಯದ ಮೂಲಕ ಭಾಷಾ ಬಾಂಧವ್ಯ ಹೇಗೆ ಮೂಡಿಸುತ್ತದೆ ಎನ್ನುವುದನ್ನು ಸಂಶೋಧನಾತ್ಮಕವಾಗಿ ಕಟ್ಟಿಕೊಡುವುದು.

೮] ಈ ಸಮುದಾಯದಲ್ಲಿನ ಪ್ರದರ್ಶನಾತ್ಮಕ ಕಲೆಗೆ ಪ್ರೋತ್ಸಾಹ ನೀಡಿ, ಕಲೆಗೆ ಸಂಬಂಧಪಟ್ಟ ಪಠ್ಯಗಳನ್ನು ಸಂಗ್ರಹಿಸುವುದು

೯] ಚೆನ್ನದಾಸ ಸಮುದಾಯದಲ್ಲಿನ ಸಾಹಿತ್ಯದ ಜ್ಞಾನ ಪರಂಪರೆಯನ್ನು ಆಧುನಿಕ ಸಮಾಜಕ್ಕೆ ಪರಿಚಯಿಸುವುದು.

೧೦] ಚೆನ್ನದಾಸ ಸಮುದಾಯದ ಸಮಸ್ಯೆ ಮತ್ತು ಸವಾಲುಗಳನ್ನು ಗುರುತಿಸುವುದು.

## ೧.೩ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನದಲ್ಲಿ ನನ್ನ ಅಧ್ಯಯನದ ಇತಿಮಿತಿ ಮತ್ತು ಪ್ರಮಾಣವನ್ನು ಗಮನದಲ್ಲಿರಿಸಿಕೊಂಡು ಚೆನ್ನದಾಸರ ಸಾಹಿತ್ಯ: ಅಲೆಮಾರಿ ಸಂಕಥನವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅತ್ಯಂತ ವೈವಿಧ್ಯಮಯವಾಗಿರುವ ಹೈದ್ರಾಬಾದ್ ಕರ್ನಾಟಕದ ಆಯ್ದು ಜಿಲ್ಲೆಗಳಲ್ಲಿ ಮತ್ತು ವ್ಯಾಪ್ತಿಯ ಹೊರಗಡೆಯು ಸಹ ಚೆನ್ನದಾಸ ಸಮುದಾಯದ ಸಾಹಿತ್ಯವನ್ನು ಸಂಗ್ರಹಿಸಿದ್ದು, ಇನ್ನೂ ಹೆಚ್ಚಿನ ಅಧ್ಯಯನ ಮಾಡುವುದು ಅಗತ್ಯವಿದೆ. ಅಧ್ಯಯನದ ಅನುಕೂಲತೆಯ ಹಿನ್ನೆಲೆಯಲ್ಲಿ ಈ ಪ್ರಬಂಧ ರಚನೆಯನ್ನು ಒಟ್ಟು ಐದು ಅಧ್ಯಯನಗಳನ್ನಾಗಿ ಮಾಡಿಕೊಂಡು ಅಭ್ಯಸಿಸಲಾಗಿದೆ. ಅವುಗಳನ್ನು ಈ ಕೆಳಗಿನಂತೆ ಅಧ್ಯಯನಗಳಲ್ಲಿ ವಿಸ್ತರಿಸಲಾಗಿದೆ.

**ಅಧ್ಯಾಯ-ಒಂದು: ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಮತ್ತು ಸ್ವರೂಪ**

ಮೊದಲನೆಯ ಅಧ್ಯಾಯದಲ್ಲಿ ಸಂಶೋಧನಾ ವಿಧಾನಗಳನ್ನು ಬಳಸಿಕೊಂಡು ಅಧ್ಯಯನ ವಿಷಯವನ್ನು ಅರ್ಥೈಸುತ್ತಾ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ-ಕುರಿತು ಸ್ವರೂಪಗಳ ಚರ್ಚಿಸಲಾಗಿದೆ. ಹಾಗೂ ಚೆನ್ನದಾಸ ಸಮುದಾಯದ ಇದುವರೆಗೂ ನಡೆದ ಅಧ್ಯಯನ ಬಗ್ಗೆ ಸಂಕ್ಷಿಪ್ತವಾಗಿ ಉಲ್ಲೇಖಿಸಲಾಗಿದೆ.

**ಅಧ್ಯಾಯ-ಎರಡು: ಅಲೆಮಾರಿಗಳು/ಅರೆಅಲೆಮಾರಿಗಳು**

ಎರಡನೆಯ ಅಧ್ಯಾಯದಲ್ಲಿ ಅಲೆಮಾರಿ/ಅರೆಅಲೆಮಾರಿ ಪದದ ಅರ್ಥ, ಸ್ವರೂಪ ಮತ್ತು ಲಕ್ಷಣಗಳನ್ನು ವಿವರಿಸಲಾಗಿದೆ ಹಾಗೂ ದಾಸ ಮತ್ತು ಚೆನ್ನದಾಸ ಪದದ ಅರ್ಥಗಳ ವಿವರಣೆ ಜೊತೆಗೆ ಚೆನ್ನದಾಸ ಸಮುದಾಯದಲ್ಲಿ ಕಂಡುಬರುವ ಉಪನಾಮಗಳ ಕುರಿತು ಪರಿಚಯಾತ್ಮಕವಾಗಿ ಗುರುತಿಸಿ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ-ಮೂರು: ಚೆನ್ನದಾಸ ಸಮುದಾಯದ ಮೌಖಿಕ ಸಾಹಿತ್ಯ ಪ್ರಕಾರಗಳು**

ಮೂರನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಹರಡಿಕೊಂಡಿರುವ ಅದರಲ್ಲೂ ಹೈದ್ರಾಬಾದ ಕರ್ನಾಟಕದ ಚೆನ್ನದಾಸ ಸಮುದಾಯದಲ್ಲಿನ ಮೌಖಿಕ ಸಾಹಿತ್ಯ ಪ್ರಕಾರಗಳಾದ ತತ್ವಪದಗಳು, ಲಾವಣಿಗಳು, ಗಾದೆಗಳು, ಕಥನ ಕಾವ್ಯಗಳು ಮತ್ತು ಬಯಲಾಟಗಳನ್ನು ಗುರುತಿಸಿಕೊಂಡು, ವಿಶ್ಲೇಷಣೆಯೊಂದಿಗೆ ಅಧ್ಯಯನ ನಡೆಸಲಾಗಿದೆ.

**ಅಧ್ಯಾಯ–ನಾಲ್ಕು: ಚೆನ್ನದಾಸರ ಮೌಖಿಕ ಸಂಕಥನಗಳು**

ಈ ಅಧ್ಯಾಯದಲ್ಲಿ ಸಮುದಾಯದಲ್ಲಿನ ವಿಶಿಷ್ಟವಾಗಿರುವ ಮರುಗು ಭಾಷೆಯ ಬಗ್ಗೆ, ಮತ್ತು ಸಾಮಾಜಿಕ ವ್ಯವಸ್ಥೆಯಲ್ಲಿ ಬದುಕು, ಆಹಾರ ಪದ್ದತಿ, ಉಡಿಗೆ–ತೊಡಿಗೆ, ವೇಷ–ಭೂಷಣಗಳು, ವೃತ್ತಿಯ ಪ್ರಕಾರಗಳು, ಒಳಾಡಳಿತ ವ್ಯವಸ್ಥೆ, ಕುಟುಂಬ, ರಕ್ತ ಸಂಬಂಧ, ಬೆಡಗುಗಳು, ಭಾಷೆ ಮತ್ತು ಸ್ತ್ರೀಯರ ಸ್ಥಾನಮಾನಗಳು, ಧಾರ್ಮಿಕವಾಗಿ ಸಂಪ್ರದಾಯ–ಆಚರಣೆಗಳು, ನಂಬಿಕೆಗಳು, ದೇವರು, ಆಚರಿಸುವ ಹಬ್ಬಗಳು ಇವರ ಜೀವನದಲ್ಲಿ ಯಾವ ರೀತಿ ಬೇರೂರಿವೆ ಎಂಬುದಾಗಿ ಕೂಲಂಕುಷವಾಗಿ ವಿವರಿಸಲಾಗಿದೆ. ಆರ್ಥಿಕವಾಗಿ ಚೆನ್ನದಾಸ ಸಮುದಾಯದವರ ವಾದ್ಯಗಳು, ಇವರ ಕುಟುಂಬ ನಿರ್ವಹಣೆ, ಕೃಷಿ, ಪಶುಪಾಲನೆ ಮತ್ತು ಇತರ ಕುಲಕಸುಬುಗಳ ಬಗ್ಗೆ ವಿವರಣೆ ನೀಡಲಾಗಿದೆ. ಪ್ರಸ್ತುತ ವರ್ತಮಾನದ ಸ್ಥಿತಿಗತಿಗಳನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ–ಐದು: ಚೆನ್ನದಾಸರ ಜಾನಪದ ಮತ್ತು ಆಧುನಿಕ ಮುಖಾಮುಖಿ**

ಐದನೆಯ ಅಧ್ಯಾಯದಲ್ಲಿ ಚೆನ್ನದಾಸರ ವೃತ್ತಿ ಅಥವಾ ಕುಲಕಸುಬುಗಳೊಂದಿಗೆ ಇವರ ಆಧುನಿಕತೆ ಮುಖಾಮುಖಿ ಹೇಗಿದೆ ಎಂಬುದನ್ನು ವಿವರಿಸಲಾಗಿದೆ ಹಾಗೂ ಅಲೆಮಾರಿ ಸಮುದಾಯಗಳಲ್ಲಿ ಅತ್ಯಂತ ವಿಶಿಷ್ಟವಾಗಿ ಕಂಡುಬರುವ ಈ ಸಮುದಾಯವು ಸಮಾಜದ ಬಗೆಗೆ ತನ್ನದೇ ಆದ ಲೋಕದೃಷ್ಟಿಯನ್ನು ಹೊಂದಿದ್ದು, ಈ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ಕರ್ನಾಟಕದ್ಯಾಂತ ಹರಿದು ಹಂಚಿಹೋಗಿರುವ ಚೆನ್ನದಾಸ ಸಮುದಾಯದ ಬಗ್ಗೆ ಮಾಹಿತಿ ನೀಡಿದ ಸಂಪನ್ಮೂಲ ವ್ಯಕ್ತಿಗಳು ಮತ್ತು ಸಮುದಾಯದ ಕಲಾವಿದರ ಕಿರು ಮಾಹಿತಿಯನ್ನು ಈ ಅಧ್ಯಾಯದಲ್ಲಿ ತೋರಿಸಲಾಗಿದೆ.

**ಆರನೆಯ ಅಧ್ಯಾಯದಲ್ಲಿ** ಸಂಶೋಧನೆಯ ಫಲಿತಗಳನ್ನು ಹೇಳುವುದರ ಮೂಲಕ ಕೊನೆಗೆ ಅನುಬಂಧದಲ್ಲಿ ಗ್ರಂಥಋಣ ಮತ್ತು ಛಾಯಚಿತ್ರಗಳ ಮಾಹಿತಿಯನ್ನು ನೀಡಲಾಗಿದೆ.

### ೧.೪ ಅಧ್ಯಯನದ ವಿಧಾನ

ಮುಖ್ಯವಾಗಿ ಈ ಸಂಶೋಧನೆಯು ಕ್ಷೇತ್ರಕಾರ್ಯಧಾರಿತವಾಗಿದೆ. ಮೊದಲಿಗೆ ಈಗಾಗಲೇ ಚೆನ್ನದಾಸ ಸಮುದಾಯದ ಮೇಲೆ ನಡೆದ ಅಧ್ಯಯನಗಳನ್ನು ಅವಲೋಕಿಸಲಾಗಿದೆ. ಇದರ ಜೊತೆಗೆ ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ನೆಲೆಸಿರುವ ಚೆನ್ನದಾಸ ಸಮುದಾಯದ ಸ್ಥಿತಿಗತಿಗಳನ್ನು ವಿಶ್ಲೇಷಿಸುವ ಸಲುವಾಗಿ ಕ್ಷೇತ್ರಕಾರ್ಯ ಕೈಗೊಳ್ಳಲಾಗಿದೆ. ಅಧ್ಯಯನಕ್ಕೊಳಪಟ್ಟ ಈ ಸಮುದಾಯದಿಂದಲೇ ಪ್ರಾಥಮಿಕ ತಿಳುವಳಿಕೆಯನ್ನು ಪಡೆಯಲಾಗಿದೆ. ಸಮುದಾಯದ ಮೂಲಕ ಪಡೆಯುವ ಅನುಭವಾತ್ಮ ತಿಳುವಳಿಕೆಯನ್ನು ಆಧರಿಸಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವು ಈ ಕೆಳಗಿನ ವಿಧಾನಗಳನ್ನು ಅವಲಂಬಿಸಿದೆ.

### ಚಾರಿತ್ರಿಕ ವಿಧಾನ

ಪ್ರಸ್ತುತ ಸಮಾಜದಲ್ಲಿ ಚೆನ್ನದಾಸ ಸಮುದಾಯದ ಮೌಖಿಕ ಸಾಹಿತ್ಯ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದ್ದು, ಚಾರಿತ್ರಿಕ ಬೆಳವಣಿಗೆಯನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಇಲ್ಲಿಯವರೆಗೆ ಚೆನ್ನದಾಸ ಸಮುದಾಯದ ಬಗ್ಗೆ ನಡೆದ ಅಧ್ಯಯನಗಳನ್ನು ಗಮನಿಸಲಾಗಿದೆ. ಜೊತೆಗೆ ಬೇರೆ ಬೇರೆ ಸಾಹಿತ್ಯ ಕೃತಿಗಳಲ್ಲಿ ಇರುವ ಉಲ್ಲೇಖಗಳನ್ನು ಬಳಸಿಕೊಳ್ಳಲಾಗಿದೆ. ಏಕೆಂದರೆ ಪಾರಂಪರಿಕ ಸಮಾಜದಲ್ಲಿ ಬದುಕುವ ಸಮುದಾಯಗಳ ವರ್ತಮಾನದ ಬದುಕಿನ ಗುಟ್ಟುಗಳು ಬಹುತೇಕ ಚರಿತ್ರೆಯಲ್ಲಿ ಅಡಗಿರುತ್ತವೆ. ಈ ಕಾರಣದಿಂದಾಗಿ ಚಾರಿತ್ರಿಕ ವಿಧಾನದ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲು ಪ್ರಯತ್ನಿಸಲಾಗಿದೆ.

### ಸಂದರ್ಶನ ವಿಧಾನ

ಚೆನ್ನದಾಸ ಸಮುದಾಯವು ಕರ್ನಾಟಕದ್ಯಾಂತ ಚದುರಿರುವುದರಿಂದ ಹಲವಾರು ಊರುಗಳಲ್ಲಿನ ಸಂಪನ್ಮೂಲ ವ್ಯಕ್ತಿಗಳು ಅದರಲ್ಲಿ ಪ್ರಮುಖವಾಗಿ ಸಮುದಾಯದ ಕಲಾವಿದರು, ಹಿರಿಯರನ್ನು, ಯುವಕರನ್ನು ಮತ್ತು ಮಹಿಳೆಯರನ್ನು ವೈಯಕ್ತಿಕವಾಗಿ ಸಂದರ್ಶನಕ್ಕೆ ಒಳಪಡಿಸಲಾಗಿದೆ. ಏಕೆಂದರೆ ಸಂದರ್ಶನ ವಿಧಾನ ಎಂದರೆ ಆಯಾ ಸಮುದಾಯದ ಸಾಮಾಜಿಕ, ಆರ್ಥಿಕ, ಸಾಮಾಜಿಕ ಮತ್ತು ಇತರೆ ವಿಷಯಗಳ ಬಗೆಗೆ ವಸ್ತುನಿಷ್ಠವಾಗಿ ನೋಡಲು ಅನುಕೂಲವಾಗುತ್ತದೆ. ಹಾಗಾಗಿ ಆಯಾ ಊರಿನ ಹಿರಿಯರ ಅಭಿಪ್ರಾಯಗಳನ್ನು ವಸ್ತುನಿಷ್ಠವಾಗಿ ಗಮನಿಸಿ ದಾಖಲಿಸಲಾಗಿದೆ. ಒಟ್ಟಾರೆ ಸಂದರ್ಶನದ ವಿಧಾನದ ಮೂಲಕ ಪಡೆದ ಅನುಭವವನ್ನು ಪ್ರಸ್ತುತ ಅಧ್ಯಯನದಲ್ಲಿ ಮುಖ್ಯವಾಗಿ ಬಳಸಿಕೊಳ್ಳಲಾಗಿದೆ.

### ನಮೂನೆಯ ವಿಧಾನ

ಚೆನ್ನದಾಸ ಸಮುದಾಯವು ಕರ್ನಾಟಕದ್ಯಾಂತ ಹರಡಿಕೊಂಡಿದ್ದು, ಎಲ್ಲಾ ಜಿಲ್ಲೆಯಲ್ಲಿನ ಸಮುದಾಯವನ್ನು ಅಧ್ಯಯನ ಮಾಡುವುದು ಅಸಾಧ್ಯವಾಗಿದೆ. ಪ್ರಸ್ತುತ ಅಧ್ಯಯನವು ನಿಗದಿತ ಸಮಯವನ್ನು ಹೊಂದಿದೆ. ಆದ್ದರಿಂದ ಹೈದ್ರಾಬಾದ್ ಕರ್ನಾಟಕ ವ್ಯಾಪ್ತಿಯಲ್ಲಿನ ಆಯ್ದ ಜಿಲ್ಲೆಗಳಲ್ಲಿನ ಊರುಗಳಿಗೆ ಭೇಟಿ ನೀಡಿ ಈ ಸಮುದಾಯದ ಮೌಖಿಕ ಸಾಹಿತ್ಯ ಮತ್ತು ಸಂಕಥನಗಳ ವಿಷಯದ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

### ಪ್ರಶ್ನಾವಳಿ ವಿಧಾನ

ಪ್ರಸ್ತುತ ಅಧ್ಯಯನವು ಸಾಹಿತ್ಯ ಅಧ್ಯಯನವಾಗಿರುವುದರಿಂದ ಸಮುದಾಯದ ವ್ಯಕ್ತಿಗಳು ಮತ್ತು ಕಲಾವಿದರ ಬಗೆಗಿನ ಮಾಹಿತಿಯನ್ನು ಸಂಗ್ರಹಿಸಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

### ವಿಶ್ಲೇಷಣಾತ್ಮಕ ವಿಧಾನ

ಚೆನ್ನದಾಸ ಸಮುದಾಯದಲ್ಲಿನ ಮೌಖಿಕ ಸಾಹಿತ್ಯ ಮತ್ತು ಇವರ ಈ ಸಮುದಾಯದ ಮೌಖಿಕ ಸಂಕಥನವನ್ನು ವಿಶ್ಲೇಷಣೆ ಮಾಡಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**ಅವಲೋಕನ ವಿಧಾನ**

ಅಲೆಮಾರಿ ಸಮುದಾಯಗಳಲ್ಲಿಯೇ ವಿಶಿಷ್ಟವಾಗಿರುವ ಈ ಸಮುದಾಯವು ಪ್ರಸ್ತುತ ಸಮಾಜದಲ್ಲಿ ಬದಲಾಗಿದೆಯೇ? ಎಂಬ ವಾಸ್ತವ ಸ್ಥಿತಿಯನ್ನು ಅವಲೋಕನ ಮಾಡಿಕೊಳ್ಳಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**ಧ್ವನಿಮುದ್ರಣ ಮತ್ತು ಛಾಯಾಚಿತ್ರ ವಿಧಾನ**

ಮುಖ್ಯವಾಗಿ ಚೆನ್ನದಾಸ ಸಮುದಾಯ ಮೌಖಿಕ ಸಾಹಿತ್ಯ ಅಧ್ಯಯನದ ಸಂಗ್ರಹವು ಇಲ್ಲಿಯವರೆಗೂ ನಡದೇ ಇರುವುದರಿಂದ ಇದೊಂದು ಹೊಸ ಪ್ರಯತ್ನವಾಗಿರುವುದರಿಂದ ಪೂರ್ಣ ಪ್ರಮಾಣದಲ್ಲಿ ಕ್ಷೇತ್ರಕಾರ್ಯ ಆಧಾರಿತವಾಗಿದೆ. ಆದ್ದರಿಂದ ತಂತ್ರಜ್ಞಾನ ವಸ್ತುಗಳಾದ ಕ್ಯಾಮರಾ, ಧ್ವನಿಮುದ್ರಕ ರೆಕಾರ್ಡರ್ ಬಳಸಿಕೊಂಡು ಸಮುದಾಯದ ತತ್ವಪದಗಳು, ಲಾವಣಿಗಳು, ಕಥನ ಕಾವ್ಯಗಳು, ಬಯಲಾಟ ಪದಗಳನ್ನು ಮತ್ತು ಸಮುದಾಯದ ಹಿನ್ನೆಲೆಯ ಬಗ್ಗೆ ಆಯಾ ಊರಿನ ಹಿರಿಯ ವ್ಯಕ್ತಿಗಳು ತಿಳಿಸಿದ ಮಾಹಿತಿಯನ್ನು ಸಂಗ್ರಹಿಸಲಾಯಿತು. ಜೊತೆಗೆ ಮಾಹಿತಿಗೆ ಸಂಬಂಧಪಟ್ಟಂತೆ ಛಾಯಚಿತ್ರಗಳನ್ನು ತೆಗೆಯಲು ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೧.೫ ಇದುವರೆಗೆ ನಡೆದಿರುವ ಚೆನ್ನದಾಸ ಸಮುದಾಯದ ಅಧ್ಯಯನಗಳು**

ಅಲೆಮಾರಿ ಸಮುದಾಯದ ಅಧ್ಯಯನಗಳು ಪ್ರಾರಂಭವಾದದ್ದು ಇತ್ತೀಚೆಗೆ ಅಷ್ಟೇ ಆದರೂ ಅಷ್ಟೊಂದು ವಿಶೇಷವಾಗಿ ಇಂತಹ ಸಮುದಾಯಗಳ ಬಗ್ಗೆ ವಿಸ್ತೃತವಾದ ಅಧ್ಯಯನಗಳು ನಮಗೆ ಕಂಡುಬಂದಿರುವುದಿಲ್ಲ. ಅಲ್ಲಲ್ಲಿ ಈ ಸಮುದಾಯದ ಬಗೆಗೆ ಉಲ್ಲೇಖಿಸಿರುವ ಮಾಹಿತಿ ಹಾಗೂ ವಿವರಗಳು ಕಂಡುಬರುತ್ತಿವೆ. ಇತ್ತೀಚಿನ ದಿನಗಳಲ್ಲಿ ಕೆಲವು ವಿದ್ವಾಂಸರು ಅಧ್ಯಯನಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಸಮುದಾಯವು ತೀರಾ ನಿರ್ಲಕ್ಷಕ್ಕೆ ಒಳಗಾಗಿದೆ. ಬಹುನಾಮಗಳಿಂದ ಗುರುತಿಸಿಕೊಳ್ಳುವ ಇವರ ಬಗ್ಗೆ ಪ್ರಾದೇಶಿಕ ಭಾಷೆಗಳಲ್ಲೂ ಅಧ್ಯಯನದ ಪೂರ್ಣ ಗ್ರಂಥ ರಚನೆಯಾಗಿಲ್ಲ, ಆಂಧ್ರಪ್ರದೇಶದಲ್ಲಿ "ಹೊಲೆಯ ದಾಸರಿ ಜೀವನ ವಿಧಾನಮು" ಎನ್ನುವ ಚಿಕ್ಕ ಕೃತಿ ತೆಲುಗಿನಲ್ಲಿ ಪ್ರಕಟಗೊಂಡಿದ್ದರೂ ಅದು ಕುಲಶಾಸ್ತ್ರೀಯ ಅಧ್ಯಯನದ ಕೊರತೆಯಿಂದ ಕೂಡಿದೆ. ಇವರ ಬಗ್ಗೆ ತಿಳಿದುಕೊಳ್ಳಲು ಆಯಾ ರಾಜ್ಯದಲ್ಲಿನ ಜಿಲ್ಲೆಗಳ ಗ್ಯಾಝೇಟಿಯರುಗಳು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಪ್ರಕಟಗೊಂಡಿರುವ ಕೆಲವು ಪ್ರಬಂಧಗಳಲ್ಲಿ ಚೆನ್ನದಾಸರ ಬಗ್ಗೆ ವಿವರಣೆ ಇದೆ.

**ಥರ್ಸ್ಟನ್ ರವರ ಪ್ರಕಾರ:** (castes and tribes of southern india) 'ತೆಲುಗು, ಬಣಜಿಗ, ಹೊಲೆಯ, ತಿಗಳ ಮತ್ತು ಒಕ್ಕಲಿಗ ಸಮುದಾಯದವರು ವೈಷ್ಣವ ದೀಕ್ಷೆ ಸ್ವೀಕರಿಸಿ ದಾಸರಿಗಳಾಗಿದ್ದಾರೆ' ಎಂದಿದ್ದಾರೆ.

**"ಸಯ್ಯದ್ ಸಿರಾಜ್ ಉಲ್‌ಹಸನ್ ಅವರ ಪ್ರಕಾರ:** ದಾಸರಿ ಎಂದರೆ ವೈಷ್ಣವ ಭಿಕ್ಷುಕರ ವರ್ಗ ದಾಸ ಅಥವಾ 'ದೇವರ ಸೇವಕ' ಎಂಬುದರಿಂದ ಈ ಹೆಸರು ಬಂದಿದೆ ಎಂದಿರುವರು 'ದಾಸರಿ,'

ದಾಸ ಎಂಬ ಪದಗಳು ಸೇವಕ ಎಂಬರ್ಥವನ್ನು ಕೊಡುತ್ತದೆ. ಕೆಲವು ವಿದ್ವಾಂಸರು ದೇವರ ಸೇವೆಗೆ ಮೀಸಲಾದವರು ದಾಸರು ಎಂದು ಗುರುತಿಸಿದ್ದಾರೆ. ಮೂಲತ: ತೆಲುಗಿನಿಂದ ನಾಮಾಂಕಿತಗೊಂಡ ಇವರಲ್ಲಿ ಬೇರೆ ಬೇರೆ ಸ್ವಗೋತ್ರ ಪಂಗಡಗಳಿರುವುದಾಗಿ ಹೇಳಿರುವ ಇವರು ಹತ್ತು ಒಳಪಂಗಡಗಳನ್ನು ಹೆಸರಿಸಿದ್ದಾರೆ.

ಬುಕ್ಕದಾಸರಿ, ಪಾಗದಾಸರಿ, ದಂಡೆದಾಸರಿ, ಭಗವತ ಅಥವಾ ಭುಟ್ಟೆದಾಸರಿ, ಕುಂಚಲೋಯ ಅಥವಾ ತೆಲಗದಾಸರಿ, ಚೆನ್ನದಾಸರಿ, ಕಂಗೆದ್ದುಲುದಾಸರಿ, ಮಾಲಾ ದಾಸರಿ, ಹೊಲೆದಾಸರಿ ಮತ್ತು ಚೆಂಚುದಾಸರಿ ಅಲ್ಲದೇ ಈ ದಾಸರಿಗಳಲ್ಲಿ ಹಲವಾರು ಹೊರಬಾಂಧವ್ಯ ವಿಭಾಗಗಳಿರುವುದನ್ನು ಗುರುತಿಸಲಾಗಿದೆ.

**ಎಲ್ ಕೆ ಅನಂತಕೃಷ್ಣ ಅಯ್ಯರ್** ರವರು ಭಿಕ್ಷೆ ಬೇಡುವ ವೈಷ್ಣವ ಜಾತಿಯೇ ದಾಸರಿಯಾಗಿದೆ. ದಾಸರಿ ಎಂಬುದು ಯಾವುದೇ ನಿರ್ದಿಷ್ಟ ಜಾತಿಯನ್ನು ಸೂಚಿಸುವುದಿಲ್ಲ. ಬ್ರಾಹ್ಮಣೇತರ ಯಾವುದೇ ನಿರ್ದಿಷ್ಟ ಜಾತಿಗೆಸೇರುವ ಎಲ್ಲಾ ವ್ಯಕ್ತಿಗಳಿಗೆ ಇದು ಅನ್ವಯಿಸುತ್ತದೆ. ಹೊಸದಾಗಿ ಸೇರುವ ಜಾತಿಗಳೆಂದರೆ ಬಣಜಿಗ, ಕುರುಬ, ವಕ್ಕಲಿಗ, ಸಾಲಿ, ತಿಗಳ, ಗೊಲ್ಲ, ಬೇಡ, ಬೆಸ್ತ, ವಡ್ಡ, ಹೊಲೆಯ ಮತ್ತು ಮಾದಿಗ. ೧೯೦೧ ರ ಮೈಸೂರು ಜನಗಣತಿ ವರದಿ ಪ್ರಕಾರ ಇವರು ಶೂದ್ರರಿಗೆ ಸೇರಿದ ವಿವಿಧ ವರ್ಗಗಳಲ್ಲಿರುವ ಭಿಕ್ಷುಕರೆಂದು ವಿವರಿಸಿದೆ. ಅಲ್ಲದೆ ಇವರು ರಾಜ್ಯದ ಎಲ್ಲಾ ಕಡೆಗಳಲ್ಲೂ ಅಂದರೆ ಹೆಚ್ಚಾಗಿ ಕೋಲಾರ, ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆ ಮತ್ತು ಮದ್ರಾಸ್ ಪ್ರಾಂತ್ಯದ ಉತ್ತರ ಆರ್ಕಾಟ್, ಅನಂತಪುರ, ತಂಜಾವೂರು, ಮಧುರೈಗಳಲ್ಲೂ ಕೂಡ ಕಂಡುಬರುತ್ತಾರೆ ಎಂದಿರುವರು.

**ಆರ್ ಗುಪ್ತಾರವರು** ದಂಡಿಗದಾಸ/ಚೆನ್ನದಾಸರ ಪ್ರಬಂಧದಲ್ಲಿ ದಂಡಿಗ ದಾಸರನ್ನು ಚೆನ್ನದಾಸರು, ಜಂಬೂ ದಾಸರು ಹಾಗೂ ಹರಿದಾಸರು ಎಂದೂ ಕರೆಯುವರು ಎಂದಿದ್ದಾರೆ. ಆಂದ್ರಪ್ರದೇಶದವರಾದ ಇವರು ಕರ್ನಾಟಕದಲ್ಲಿ ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿಯೂ ಇರುವರು ಎಂದಿದ್ದಾರೆ. ೧೯೮೧ ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿಯ ಇವರ ಜನಸಂಖ್ಯೆಯು ೧೭,೭೩೨ ಇರುತ್ತದೆ.

**ಖಾಸ್ಮಿ** ಅವರ ಮತ್ತೊಂದು ಲೇಖನದಲ್ಲಿ"ಹೊಲೆಯ ದಾಸರಿ ಕೃತಿಯಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಕೇಂದ್ರಿಕೃತಗೊಂಡಿರುವ ಹೊಲೆಯ ದಾಸರಿಗಳು ಕರ್ನಾಟಕದಲ್ಲಿ ೧೯೮೧ ಜನಗಣತಿಯ ಪ್ರಕಾರ ೨೮೭೨ ಇರುವರು. ಮುಂಬಯಿ ಗ್ಯಾಝೆಟೀಯರನಲ್ಲಿ ಉತ್ತರ ಕರ್ನಾಟಕದ ಬೆಳಗಾವಿ, ವಿಜಾಪುರ, ಧಾರವಾಡ, ಮತ್ತು ಕಾರವಾರ ಜಿಲ್ಲೆಗಳಲ್ಲಿ ಕಂಡುಬರುವ ದಾಸರುಗಳನ್ನು ೨ ಗುಂಪುಗಳಾಗಿ ವಿಂಗಡಿಸಿದ್ದಾರೆ

೧. ಗುಡಿಗಳ ಪರಿಚಾರಕರು

೨. ತಿರುಕರು

ಗುಡಿಗಳ ಪರಿಚಾರಕರು ಈ ಭಾಗದ ದಾಸರನ್ನು ಕುರಿತು ಇವರು ಕಾನಡಾ(ಕಾರವಾರ)ಹೊರತಾಗಿ ಮೂರು ಜಿಲ್ಲೆಗಳಲ್ಲಿ ವಾಸಿಸುತ್ತರೆಂದು ತಿಳಿಸಿದ್ದಾರೆ. ಅಲ್ಲದೆ ಇವರಲ್ಲಿ ಗೊಲ್ಲದಾಸರು, ವೊಳ್ಳೆದಾಸರು, ತೆಲುಗು ದಾಸರು, ಗಂಡುದಾಸರು, ತಿರುಮಲ ದಾಸರು, ಬ್ಯಾಡದಾಸರು, ಹೊಲೆಯದಾಸರು ಎಂಬ ವರ್ಗಗಳಿವೆ. ಹಾಗೂ ಬ್ಯಾಡದಾಸರು ಬೇಡರ ಕುಲದವರು, ಹೊಲೆಯದಾಸರು ಹೊಲೆಯರು, ತೆಲುಗುದಾಸರು ತೆಲುಗು ದೇಶದಿಂದ ಬಂದ ಕಬ್ಬಲಿಗೇರ ಕುಲದವರು ಎಂದು ಗುರುತಿಸಿದ್ದಾರೆ. ಗೊಲ್ಲದಾಸರು ಧಾರವಾಡ ಜಿಲ್ಲೆಯಲ್ಲಿ ಒಕ್ಕಲುತನದಿಂದ ಜೀವಿಸುತ್ತಿದ್ದಾರೆ. ತಿರುಕರು ಸಹ ಈ ನಾಲ್ಕು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಮತ್ತು ದಂಡಿಗ ದಾಸರು ವಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ, ಹೊಲೆಯ ದಾಸರು ಬಾದಾಮಿಯಲ್ಲಿ ಕಂಡುಬರುತ್ತಾರೆ.

ಕನ್ನಡದಲ್ಲಿ ಈ ಸಮುದಾಯವನ್ನೇ ಕೇಂದ್ರವನ್ನಾಗಿಟ್ಟುಕೊಂಡು ಬರೆದ ಪ್ರಬಂಧವೆಂದರೆ **ಬಿ ವಿ ಗುಂಜೆಟ್ಟಿ** ಅವರ 'ದಾಸರು'ಎನ್ನುವ ಪ್ರಬಂಧ. ಕರ್ನಾಟಕ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠದಿಂದ ಪ್ರಕಾಶಿತಗೊಂಡಿರುವ ಜಾನಪದ ಸಾಹಿತ್ಯ ದರ್ಶನ ಭಾಗ ೬ ರಲ್ಲಿ ಈ ಪ್ರಬಂಧ ಪ್ರಕಟಗೊಂಡಿದೆ. ಇವರು ದಾಸರುಗಳ ಬಗ್ಗೆ ಬರೆಯುತ್ತಾ ದಾಸರಿ ಎನ್ನುವುದು ಒಂದು ವಿಶಿಷ್ಟ ಜಾತಿಯನ್ನು ಸೂಚಿಸದೆ ಬ್ರಾಹ್ಮಣೇತರ ಯಾವುದೇ ಜಾತಿಯವರು ದಾಸರಿಗಳಾಗಬಹುದು. ಬಣಜಿಗ, ಕುರುಬ, ಒಕ್ಕಲಿಗ, ಸಾತಿ, ತಿಗಳ, ಗೊಲ್ಲ, ಬೇಡ, ಬೆಸ್ತ, ಒಡ್ಡ, ಹೊಲೆಯ, ಮಾದಿಗ ಮೊದಲಾದ ಜಾತಿಗಳಿಂದ ಬಂದವರೂ ದಾಸರಿಗಳಾದಂತಿದೆ. ಇವರು ಕೀಳುಕುಲದವರು, ಭಿಕ್ಷೆಯನ್ನು ಬೇಡಿ ಉಪ ಜೀವಿಸುವವರು. ಹಾಡುವುದು ಬಾರಿಸುವುದು, ಆದಿ ಕಲಾ ನಿಪುಣರು ಆಗಿದ್ದರೆಂಬುದು ಎಷ್ಟೋ ತಿಳಿಯದು. ಆದರೂ ದೇವರ ಸೇವಾ ಕಾರ್ಯಗೈವ ಇವರು ದಾಸರಿಗಳು ಎಂದು ಖ್ಯಾತರಾಗಿರಲು ಸಾಕು ಎಂದಿರುವರು.

**ಬಿ ವಿ ಗುಂಜೆಟ್ಟಿ** ಅವರ ಪ್ರಬಂಧದ ಉಳಿದೆಲ್ಲ ಭಾಗವು ಮುಖ್ಯವಾಗಿ ಈ ಮೇಲಿನ ಅನಂತ ಕೃಷ್ಣ ಅಯ್ಯರ್, ಥರ್ಸ್ಟನ್ ಮತ್ತು ಬಾಂಬೆ ಗೆಝೆಟೀಯರ್‌ಗಳನ್ನು ಅವಲಂಬಿಸಿ ಬರೆಯಲ್ಪಟ್ಟಿದೆ. ಕರ್ನಾಟಕ ಜನಪದ ರಂಗಭೂಮಿ ಕುರಿತು ಬರೆಯುವಾಗ, ದಾಸರಾಟದ ಕುರಿತು ವಿವೇಚಿಸುವಾಗ ದಾಸರ ಕುರಿತು ಪ್ರಾಸಂಗಿಕವಾಗಿ ಬರೆದಿರುವ ಎಂ.ಟಿ. ಧೂಪದ, ಹೆಚ್.ಕೆ. ರಂಗನಾಥ, ಎಂ.ಎಸ್. ಸುಂಕಾಪುರ, ಬಿ.ಬಿ. ಹಂಡಿ, ಚಂದ್ರಶೇಖರ ಕಂಬಾರ, ಬೆಟಗೇರಿ ಕೃಷ್ಣಶರ್ಮ, ದೇವೇಂದ್ರ ಕುಮಾರ, ಬಸವರಾಜ ಮಲಶೆಟ್ಟಿ, ನಿಂಗಣ್ಣ ಸಣ್ಣಕ್ಕಿ, ಜೀ.ಶಂ. ಪರಮಶಿವಯ್ಯ ಅವರುಗಳ ಲೇಖನ ಗ್ರಂಥಗಳಲ್ಲಿ ಪ್ರಸ್ತಾಪಿಸಲಾಗಿದೆ. ಇದಿಷ್ಟನ್ನು ಬಿಟ್ಟರೆ ಚನ್ನದಾಸರ ಸಮುದಾಯದ ಕುರಿತು ಬೇರೆ ಹೆಚ್ಚಿನ ವಿವರಗಳಿಲ್ಲ.

**ಚಂದ್ರಶೇಖರ ಕಂಬಾರ** ಅವರು ಸಂಪಾದಕರಾಗಿರುವ ಕನ್ನಡ ಜಾನಪದ ವಿಶ್ವಕೋಶದಲ್ಲಿ ದಾಸ ದೀಕ್ಷೆ ಕೊಡುವುದು, ದಾಸಪ್ಪ, ದಾಸರಾಟ ಮತ್ತು ದಾಸರಿ ಎನ್ನುವ ತಲೆಬರಹದಡಿಯಲ್ಲಿ

ಸ್ವಲ್ಪ ವಿವರಣೆಯಿದೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ವಿಶ್ವಕೋಶ ಸಂಪುಟ ೯ ರಲ್ಲಿ ದೊಂಬಿದಾಸರ ಕುರಿತು ವಿವರವಿದೆ.

**ಜಿ. ವೆಂಕಟಸುಬ್ಬಯ್ಯ** ಸಂಪಾದಕರಾಗಿರುವ ಕನ್ನಡ ನಿಘಂಟಿನ ನಾಲ್ಕನೆಯ ಸಂಪುಟದಲ್ಲಿ ದಾಸ, ದಾಸಪಂಥ, ದಾಸರಿ ಶಬ್ದಗಳ ಕುರಿತ ಅರ್ಥವಿವರಣೆಯಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಹಿ ಚಿ ಬೋರಲಿಂಗಯ್ಯ ಸಂಪಾದಕರಾಗಿರುವ ಕರ್ನಾಟಕ ಜನಪದ ಕಲೆಗಳ ಕೋಶದಲ್ಲಿ ದಾಸರಾಟದ ಸಂಕ್ಷಿಪ್ತ ಪರಿಚಯವಿದೆ. ಇದೇ ವಿಶ್ವವಿದ್ಯಾಲಯದಿಂದ ಪ್ರಕಾಶಿತಗೊಂಡಿರುವ ಕರ್ನಾಟಕ ರಾಜ್ಯ ಕೋಶ ೪ ಜನಸಮುದಾಯದ ಉಪಜಾತಿಗಳ ಕಿರು ಪರಿಚಯವಿದೆ. ಕನ್ನಡ ಪುಸ್ತಕ ಪ್ರಾಧಿಕಾರವು ಪ್ರಕಟಿಸಿರುವ ಜಾನಪದ ಕೈಪಿಡಿಯಲ್ಲಿ ದಾಸರಾಟದ ಕುರಿತು ಸಂಕ್ಷಿಪ್ತ ವಿವರವಿದೆ.

**ಹಿ.ಚಿ. ಬೋರಲಿಂಗಯ್ಯನವರು** ಬರೆದಿರುವ ದಾಸಪ್ಪ ಜೋಗಪ್ಪ ಕೃತಿಯಲ್ಲಿ ದಾಸಪ್ಪ ಜೋಗಪ್ಪ ಸಂಪ್ರದಾಯಗಳ ವಿವರಣೆಯಿದ್ದು, ದಾಸಪ್ಪಗಳ ವಿಶ್ಲೇಷಣೆಯಿದೆ. ವಿವರಣೆ ಗಮನಿಸಿದರೆ ಚೆನ್ನದಾಸರ ಸಮುದಾಯವನ್ನೇ ಹೇಳುತ್ತಿರುವಂತಿದ್ದರೂ ಅಲ್ಲಿ ದಾಸಪ್ಪಗಳ ಸಾಮಾಜಿಕ ಹಿನ್ನಲೆಯ ವಿವರಣೆಯ ಕೊರತೆಯಿದೆ. ಕುಲಶಾಸ್ತ್ರೀಯ ರೀತಿಯ ಸ್ವಲ್ಪವಾದರೂ ವಿವರಣೆಯಿದ್ದರೂ ಈ ಸಮುದಾಯದ ಪ್ರಮುಖ ಮಾಹಿತಿಯಾಧಾರಿತ ಪ್ರಥಮ ಕೃತಿ ಇದಾಗಿರುತ್ತಿತ್ತು. ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳ ಚೆನ್ನದಾಸರ ಕ್ಷೇಮಾಭಿವೃದ್ಧಿ ಸಂಘದಿಂದ ಪ್ರಕಾಶಿತಗೊಂಡಿರುವ ೨೪ ಪುಟಗಳ ಕಿರುಪುಸ್ತಕ ದಾಸ ಜನಾಂಗವು ದಾಸ ಸಮುದಾಯದ ಉಪನಾಮಗಳ ಕಿರು ಮಾಹಿತಿ ನೀಡುತ್ತದೆ.

ಯಲ್ಲಪ್ಪ. ಬಿ. ಹಿಮ್ಮಡಿ ರವರ "ಚೆನ್ನದಾಸರು" ಎಂಬ ಪುಸ್ತಕದಲ್ಲಿ ಚೆನ್ನದಾಸ ಸಮುದಾಯದ ಆರ್ಥಿಕ, ಸಾಮಾಜಿಕ ಜೀವನ ಸ್ಥಿತಿಗತಿಯ ಬಗ್ಗೆ ಮಾಹಿತಿ ನೀಡಿದ್ದಾರೆ.

ಜೀ.ಶಂ.ಪ ರವರ "ದಕ್ಷಿಣ ಭಾರತದ ಕಾವ್ಯಪ್ರಕಾರಗಳು" ಪುಸ್ತಕದಲ್ಲಿ ಲೌಖಿಕ ಮತ್ತು ಧಾರ್ಮಿಕ ವೃತ್ತಿಗಾಯಕರ ಬಗ್ಗೆ ವಿವರಣೆ ದಾಸ ಸಮುದಾಯದ ಬಗ್ಗೆ ವಿವರಣೆ ನೀಡಿದ್ದಾರೆ.

ಮಲ್ಲಿಕಾರ್ಜುನ ಮಾನ್ಪಡೆ ರವರ "ಚೆನ್ನದಾಸರು" ಪುಸ್ತಕದಲ್ಲಿ ಚೆನ್ನದಾಸ ಸಮುದಾಯವು ಪಾರಂಪರಿಕ ಕಲೆಗೆ ತನ್ನ ಜೀವನವನ್ನೇ ಮುಡಿಪಾಗಿಟ್ಟುಕೊಂಡು ಪ್ರಸ್ತುತ ಸಮಾಜದಲ್ಲಿ ಅನುಭವಿಸುತ್ತಿರುವ ಸಮಸ್ಯೆಗಳು ಮತ್ತು ಸವಾಲುಗಳನ್ನು ಗುರುತಿಸಿ ಅವುಗಳಿಗೆ ಪರಿಹಾರೋಪಾಯಗಳನ್ನು ಸೂಚಿಸುವ ಪ್ರಯತ್ನ ಮಾಡಿರುತ್ತಾರೆ.

ಕರ್ನಾಟಕದ ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಇಂಥ ಬೇರೆ ಬೇರೆ ಸಮುದಾಯಗಳ ಕುರಿತ ಜನಾಂಗೀಯ ಅಧ್ಯಯನಗಳು ಬೇಕಾದಷ್ಟು ನಡೆದರೂ ಚೆನ್ನದಾಸರ ಸಮುದಾಯದ ಕುರಿತ ಅಧ್ಯಯನಗಳು ನಡೆದಿರುವುದು ಕಡಿಮೆ ಈವರೆಗೂ ನಡೆದಿಲ್ಲ. ಆಧುನಿಕ ಬದುಕಿಗೆ ತಮ್ಮನ್ನು ಒಡ್ಡಿಕೊಳ್ಳುತ್ತಿರುವ ಈ ಸಮುದಾಯ ತನ್ನ ಹಲವಾರು ಸಂಪ್ರದಾಯ ಆಚರಣೆಗಳನ್ನು

ಬದಲಾವಣೆಯತ್ತ ಮುಖ ಮಾಡಿರುವ ಸಂದರ್ಭದಲ್ಲಿ ಅವರಲ್ಲಿ ಮಾಹಿತಿ ನೀಡುವ ಅನೇಕ ಹಿರಿಯ ಜೀವಗಳು ಗತಿಸಿರುವುದರಿಂದ ಜನಾಂಗಿಕ ಸಾಂಸ್ಕೃತಿಕ ಮಾಹಿತಿಯ ಕೊರತೆಯು ಉಂಟಾಗುತ್ತದೆ. ಹೀಗೆ ಹಲವು ವೈಶಿಷ್ಟತೆಗಳನ್ನು ಹೊಂದಿರುವ ಈ ಸಮುದಾಯವು ಇಂದು ಸಹ ಯಾವುದೇ ಬದಲಾವಣೆ ಹೊಂದದೆ ಪ್ರಸ್ತುತ ಸಮಾಜಕ್ಕೆ ದೊಡ್ಡ ಸವಾಲಾಗಿದ್ದಾರೆ. ಇವರು ಇಂದಿಗೂ ಕಲಾವೃತ್ತಿಯನ್ನು ನಂಬಿಕೊಂಡು ಜೀವನ ಸಾಗಿಸುತ್ತಿರುವ ಈ ಸಮುದಾಯದ ಬಗ್ಗೆ ಇನ್ನೂ ಹೆಚ್ಚು ಅಧ್ಯಯನದ ಅವಶ್ಯಕತೆ ಇದೆ.



# ಅಧ್ಯಾಯ : ಎರಡು

## ಅಲೆಮಾರಿಗಳು

೨.೧ ಅಲೆಮಾರಿ ಪದದ ಅರ್ಥ ಮತ್ತು ಲಕ್ಷಣಗಳು

೨.೨ ದಾಸ ಪದದ ಅರ್ಥ

೨.೩ ಚೆನ್ನದಾಸ ಪದದ ಅರ್ಥ

೨.೪ ಕರ್ನಾಟಕ ಭೌಗೋಳಿಕ ನೆಲೆಗಳು

೨.೫ ಚೆನ್ನದಾಸ ಸಮುದಾಯದ ಉಪನಾಮಗಳು

೨.೫.೧ ಹೊಲೆಯದಾಸರು

೨.೫.೨ ದಂಡಿಗೆದಾಸರು

೨.೫.೩ ಮಾಲಾದಾಸರು

೨.೬ ಚೆನ್ನದಾಸ ಕುಲಲಾಂಛನಗಳು

# ಅಧ್ಯಾಯ: ಎರಡು

## ಅಲೆಮಾರಿಗಳು

ಭಾರತ ದೇಶವು ಪ್ರಾಚೀನ ಕಾಲದಿಂದಲೂ ಬಹು ದೊಡ್ಡ ಸಂಸ್ಕೃತಿ ಪರಂಪರೆಯನ್ನು ಹೊಂದಿರುವ ದೇಶವಾಗಿದೆ. ಹಲವಾರು ಜಾತಿ, ಧರ್ಮ ಆಚಾರ-ವಿಚಾರಗಳನ್ನು ತನ್ನ ಒಡಲೊಳಗೆ ಕಟ್ಟಿಕೊಂಡಿದೆ. ಇಂತಹ ಅಗಾಧವಾದ ಸಂಸ್ಕೃತಿಯನ್ನು ಕಟ್ಟಿಕೊಂಡಿರುವ ಭಾರತದಲ್ಲಿ ಹಲವಾರು ಸಮುದಾಯಗಳು ತಮ್ಮದೇ ಸಂಸ್ಕೃತಿಯನ್ನು ಉಳಿಸಿಕೊಂಡು ಸಾಗುತ್ತಿವೆ. ಮುಖ್ಯವಾಗಿ ಒಂದು ಕಡೆ ನೆಲೆ ನಿಂತ ಸಮುದಾಯಗಳು ಸಂಸ್ಕೃತಿ-ಆಚಾರ ವಿಚಾರಗಳನ್ನು ಪಾಲಿಸಿಕೊಂಡು ಸಮಾಜದಲ್ಲಿ ಗುರುತರವಾದ ಜವಾಬ್ದಾರಿಗಳ ಮೂಲಕ ಜೀವನ ಸಾಗಿಸುತ್ತಿದ್ದಾರೆ. ಮತ್ತೊಂದು ಸಮುದಾಯಗಳು ಒಂದು ಕಡೆ ನೆಲೆ ನಿಲ್ಲದೆ ಹಲವಾರು ಸಮಸ್ಯೆಗಳ ಜೊತೆಯಲ್ಲಿಯೇ ಅಲೆಮಾರಿಗಳಾಗಿ ತಮ್ಮದೇ ಸಂಸ್ಕೃತಿ ಆಚಾರ-ವಿಚಾರ ಸಂಪ್ರದಾಯಗಳನ್ನು ಕಟ್ಟಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಇಂತಹ ಒಂದು ಅಲೆಮಾರಿ ಸಮುದಾಯಗಳು ಭಾರತಾದ್ಯಂತ ವಿವಿಧ ಕಡೆ ಹಲವಾರು ಹೆಸರುಗಳಿಂದ ಅಲೆಮಾರಿಗಳಾಗಿ ಅಲೆದಾಡುತ್ತಿದ್ದಾರೆ ಹಾಗೂ ಈ ಅಲೆಮಾರಿ ಸಮುದಾಯಗಳು ಕನಿಷ್ಟ ನಾಲ್ಕು ಭಾಷೆಗಳನ್ನು ಮಾತಾಡುವುದರ ಮೂಲಕ ಅವರ ಮಾತೃಭಾಷೆ ಯಾವುದು ಎಂಬುದು ಗೊತ್ತಾಗಲಾರದ ಮಟ್ಟಿಗೆ ಅವರಾಡುವ ಭಾಷೆಗಳ ಪ್ರಯೋಗ ಪರಿಣತಿ ಅವರಲ್ಲಿ ಪ್ರಬುದ್ಧವಾಗಿದೆ. ಇಂತಹ ಅಲೆಮಾರಿ ಸಮುದಾಯಗಳು ಭಾರತಾದ್ಯಂತ ಕಂಡು ಬರುತ್ತಾರೆ.

ಅಲೆಮಾರಿಗಳನ್ನು ವಿಶ್ವದ ಮೂಲಿಗರೆನ್ನಬಹುದಾಗಿದೆ. ಇವರಲ್ಲಿ ಹಲವು ವರ್ಗಗಳನ್ನಾಗಿ ವಿಂಗಡಿಸಬಹುದಾಗಿದ್ದು, ಅವುಗಳಲ್ಲಿ ಮೊದಲನೆಯದಾಗಿ ಪ್ರಕೃತಿ ಮಡಿಲಿನ ಪಾರಂಪರಿಕ ಪಶುಪಾಲಕ ಅಲೆಮಾರಿಗಳು, ಎರಡನೆಯದಾಗಿ ಪಾರಂಪರಿಕ ಧಾರ್ಮಿಕ ಭಿಕ್ಷಾವೃತ್ತಿಯ ಅಲೆಮಾರಿಗಳು ಮತ್ತು ಆಧುನಿಕ ವೈಪರಿತ್ಯಗಳ ಹಿನ್ನೆಲೆಯಲ್ಲಿ ಉಗಮಗೊಂಡ ಅಲೆಮಾರಿನ ಜನ ಸಮೂಹಗಳು. ವಿಶ್ವಸಂಸ್ಥೆಯ ಇತ್ತೀಚಿನ ಒಂದು ಅಂದಾಜಿನ ಪ್ರಕಾರ ವಿಶ್ವದಲ್ಲಿ ಶೇಕಡಾ ೨೦ರಷ್ಟು ಅಲೆಮಾರಿಗಳಿರುವರು. ದೇಶದ ಜನಸಂಖ್ಯೆಯನ್ನು ಗುರುತಿಸಲು ಜನಗಣತಿಯನ್ನು ೧೮೮೧ರಲ್ಲಿ ಆರಂಭಿಸಲಾಯಿತು. ಭಾರತದ ೧೮೮೧ರ ಜನಗಣತಿಯಲ್ಲಿ ಒಟ್ಟು ೧೯೨೯ ಜಾತಿ ಮತ್ತು ಬುಡಕಟ್ಟು ಸಮುದಾಯಗಳು ದಾಖಲಾಗಿವೆ. ಇದರಲ್ಲಿ ೮೫೫ ಮಹತ್ವದ ಜಾತಿ ಮತ್ತು ಬುಡಕಟ್ಟು

ಸಮುದಾಯಗಳು ಹಾಗೂ ಸಾವಿರ ಜನರೊಳಗಿರುವ ೧೦೭೪ ಅಲ್ಪಸಂಖ್ಯಾತ ಜಾತಿ ಮತ್ತು ಬುಡಕಟ್ಟುಗಳು ದಾಖಲಾಗಿರುವುದನ್ನು ಕಾಣಬಹುದು.

ಪ್ರಸ್ತುತ ಭಾರತದಲ್ಲಿ ಒಟ್ಟು ಜನಸಂಖ್ಯೆ ಸುಮಾರು ೧೦ ಕೋಟಿಯನ್ನು ಮೀರಿದೆ. ಅಂದರೆ ಭಾರತದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ಶೇ.೧೦ ರಷ್ಟು ಜನ ಅಲೆಮಾರಿ ಸಮುದಾಯದ ಹಿನ್ನೆಲೆಯವರು. ಈ ಪಟ್ಟಿಯಲ್ಲಿ ಹಲವು ಸಮುದಾಯಗಳು ಬೇರೆ ಬೇರೆ ರಾಜ್ಯಗಳಲ್ಲಿ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿಯೂ ಕಂಡುಬರುತ್ತಾರೆ. ಮಹಾರಾಷ್ಟ್ರ ರಾಜ್ಯದಲ್ಲಿ ಅತ್ಯಧಿಕ ಅಂದರೆ ೭೩ ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿದ್ದರೆ, ೫೬ ಅಲೆಮಾರಿ ಸಮುದಾಯಗಳನ್ನು ಹೊಂದಿರುವ ಕರ್ನಾಟಕ ರಾಜ್ಯಕ್ಕೆ ೨ ನೇ ಸ್ಥಾನ ಸಲ್ಲುತ್ತದೆ.

೧೯೫೬ ರಲ್ಲಿ ವಿಮುಕ್ತಗೊಂಡ ಅಲೆಮಾರಿ ಬುಡಕಟ್ಟುಗಳು ೧೯೫೦ ರಲ್ಲಿಯೇ ಪ್ರಕಟಗೊಂಡ ಪರಿಶಿಷ್ಟರ ಮೀಸಲಾತಿ ಪಟ್ಟಿಯಿಂದ ಹೊರಗುಳಿದು ೦೧.೦೨.೧೯೬೬ ರವರೆಗೆ ಸಂವಿಧಾನಬದ್ಧವಾಗಿ ಅನಾಥವಾಗಿದ್ದವು. ಈ ಸಮುದಾಯಗಳು ೧೯೬೬ ರಲ್ಲಿ ಅಲೆಮಾರಿ ಸಮುದಾಯಗಳು ಪ್ರತ್ಯೇಕ ಪಟ್ಟಿಯಲ್ಲಿ ಸೇರ್ಪಡೆಗೊಂಡವು. ಅಂದಿನಿಂದ ಈ ಸಮುದಾಯಗಳನ್ನು ಹಿಂದುಳಿದ ಬುಡಕಟ್ಟು ಎಂಬ ಪಟ್ಟಿಯಲ್ಲಿ ಕರ್ನಾಟಕ ರಾಜ್ಯದಾದ್ಯಂತ ೪೯ ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯಗಳನ್ನು ಗುರುತಿಸಬಹುದು. ಬೀದರ, ಕಲ್ಬುರ್ಗಿ ಮತ್ತು ರಾಯಚೂರು ಜಿಲ್ಲೆಗಳಿಗೆ ಸೀಮಿತಗೊಂಡ ಆರು ಮತ್ತು ಬಳ್ಳಾರಿ ಜಿಲ್ಲೆಗೆ ಸೀಮಿತಗೊಂಡ ಒಂದು ವಿಮುಕ್ತ ಬುಡಕಟ್ಟುಗಳು, ಬಿಜಾಪುರ, ಬೆಳಗಾಂ ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಿಗೆ ಸೀಮಿತಗೊಂಡ ೪೨ ಹಾಗೂ ಕೊಡಗು, ಬೆಳಗಾವಿ, ಬಿಜಾಪುರ, ಧಾರವಾಡ, ಉತ್ತರಕನ್ನಡ, ದಕ್ಷಿಣ ಕನ್ನಡ, ಬೀದರ, ಕಲ್ಬುರ್ಗಿ ರಾಯಚೂರು ಜಿಲ್ಲೆಗಳಿಗೆ ಹಾಗೂ ಕೊಳ್ಳೆಗಾಲ ತಾಲ್ಲೂಕಿಗೆ ಸೀಮಿತಗೊಂಡ ೯ ಇತರೆ ಬುಡಕಟ್ಟುಗಳನ್ನು ಈ ಪಟ್ಟಿಗೆ ಸೇರಿಸಿ ಸಂವಿಧಾನ ಬದ್ಧವಾಗಿ ಶಿಕ್ಷಣ ಮತ್ತು ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹವಾದವು. ಇವುಗಳಿಗೆ ೩ ಪ್ರತಿಶತ ಮೀಸಲಾತಿಯನ್ನು ಕಲ್ಪಿಸಲಾಗಿದೆ. ಇಂತಹ ಅಲೆಮಾರಿ ಸಮುದಾಯಗಳು ತಮ್ಮ ಕಟ್ಟುಪಾಡುಗಳನ್ನು ಬಿಟ್ಟುಕೊಡದೇ ಸಮಾಜಕ್ಕೆ ಸವಾಲಾಗಿರುವ ಅಲೆಮಾರಿ ಸಮುದಾಯಗಳನ್ನು ಕರ್ನಾಟಕದ್ಯಾಂತ ಕಾಣಬಹುದು. ಇಂತಹ ಅಲೆಮಾರಿಗಳೆಂದರೆ ಯಾರು? ಎಂಬುದರ ಬಗೆಗೆ ತಿಳಿದುಕೊಳ್ಳವುದು ಅವಶ್ಯಕವಾಗಿದೆ.

### ೨.೧ ಅಲೆಮಾರಿ ಪದದ ಅರ್ಥ ಮತ್ತು ಲಕ್ಷಣಗಳು

ಅಲೆಮಾರಿ ಎಂಬ ಪದಕ್ಕೆ ತಮಿಳಿನಲ್ಲಿ 'ಪೊಕ್ಕನ್', ತುಳುವಿನಲ್ಲಿ 'ತೆಂಡಳಿ', ತೆಲುಗಿನಲ್ಲಿ 'ತಿರುಗುಬೋತು', ಮಲೆಯಾಳಂನಲ್ಲಿ 'ತೆಂಟಿ', ಮರಾಠಿಯಲ್ಲಿ 'ಭಟಕ್ಯಾ', ಹಿಂದಿಯಲ್ಲಿ 'ಸಂಚಾರಿ', 'ಘಮಂತು', ಗ್ರೀಕಿನಲ್ಲಿ 'ನೆಮಿನ್', ಲ್ಯಾಟಿನ್ನಿನಲ್ಲಿ 'ನೆಯಮಾಸ್', ಇಂಗ್ಲೀಷ್‌ನಲ್ಲಿ 'ನ್ಯೂಮ್ಯಾಡ್' ಜೊತೆಗೆ ಪರದೇಶಿ ನೆಲೆಯಿಲ್ಲದವರು; ದೇಶ ಸಂಚಾರಿಗಳು; ಪರಸ್ಥಳದವರು; ಹೊರಗಡೆಯವರು; ಉಚಲ್ಯಾ; ಜೆಪ್ಸಿ, ಬೀಡುಬಿಡುವವರು, ಗುಳೆಹೋಗುವವರು, ವಲಸಿಗರು, ಗಿರಿಜನರು, ಎಂಬ

ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗುತ್ತದೆ. ಭಿಕ್ಷಾವೃತ್ತಿಯ ಹಿನ್ನೆಲೆಯಲ್ಲಿ ಇವರನ್ನು ತಮಿಳಿನಲ್ಲಿ ಪಿಚ್ಚೈಕರಾ, ಹಿಂದಿಯಲ್ಲಿ ಭಿಕಾರಿ, ಕನ್ನಡದಲ್ಲಿ ಭಿಕ್ಷುಕರೆಂತಲೂ ಕರೆಯುವರು. ಹಾಗೆಯೇ ಜನಪದರು ಇವರನ್ನು ಗೋಸಾಯಿ, ಜಂಗಾಲಿ, ಜಂಗಾಮ, ಜ್ಯೋಗಿ, ದಾಸಯ್ಯ ಎಂತಲೂ ಕರೆಯುವರು.

ಮಾನವಶಾಸ್ತ್ರಜ್ಞರ ಪ್ರಕಾರ ಆರಂಭದಲ್ಲಿ ಪಶುಪಾಲನೆಯ ಹಿನ್ನೆಲೆಯವರನ್ನು ಮಾತ್ರ ಅಲೆಮಾರಿ ಸಮುದಾಯದವರೆಂದು ಗುರುತಿಸಿದ್ದಾರೆ. ಎನ್‌ಸೈಕ್ಲೋಪೆಡಿಯ ಬ್ರಿಟಾನಿಕಾದ ಪ್ರಕಾರ ಅಲೆಮಾರಿ ತನವು ಒಂದು ಜೀವನವಿಧಾನ ಬೇಟೆ ಮತ್ತು ಆಹಾರ ಸಂಗ್ರಹಣೆ ಪಶುಪಾಲನೆ ಅಥವಾ ವ್ಯಾಪಾರಕ್ಕಾಗಿ ಮಾನವ ಒಂದಡೆ ನೆಲೆಯೂರದೇ ದಿಕ್ಕುದೆಸೆಯಿಲ್ಲದೆ ಅಥವಾ ಕಾಲ ಕ್ರಮಾನುಸಾರದ ಅಲೆಯುವಿಕೆಯನ್ನು ಅಲೆಮಾರಿತನ ಎನ್ನಲಾಗುತ್ತದೆ.[೧]

ಇಂತಹ ಅಲೆಮಾರಿ ಸಮುದಾಯಗಳಿಗೆ ಸರ್ಕಾರ ಮತ್ತು ಸಮಾಜದಿಂದ ಗೌರವ ಸಿಗಲಿಲ್ಲ. ಜಾಗತೀಕರಣ ಮತ್ತು ಆಧುನೀಕರಣ ಗುಂಗಿನಲ್ಲಿ ಜನರು ವ್ಯವಸ್ಥೆಗಳತ್ತ ಮುಖ ಮಾಡಿದರು. ಇವರ ಸಂಸ್ಕೃತಿ ಆಚಾರ–ವಿಚಾರ ಕಲೆ ನೃತ್ಯಗಳು ಮರೀಚಿಕೆಯಾಗುವುದರ ಜೊತೆಗೆ ಇವರು ಜೀವನಕ್ಕಾಗಿ ಭಿಕ್ಷಾಟನೆಯಲ್ಲಿ ತೊಡಗಿಕೊಂಡರು. ಇದರ ಜೊತೆಗೆಯೇ ಸಾಮಾಜಿಕ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಸ್ಥಾನಮಾನಗಳು ಇಲ್ಲದೆ ಶೋಷಣೆಗೆ ಒಳಗಾಗಿ ಬದುಕಿನ ಸಂದಿಗ್ಧ ಪರಿಸ್ಥಿತಿಗೆ ಗುರಿಯಾದವು. ಪ್ರಸ್ತುತ ಸಮಾಜವು ಈ ಸಮುದಾಯದ ಪಾರಂಪರಿಕ ಜ್ಞಾನ ಶಾಖೆಯನ್ನೇ ಕಳೆದುಕೊಳ್ಳುತ್ತಿದೆ. ಇಂತಹ ವಿಶಿಷ್ಟವಾಗಿರುವ ಅಲೆಮಾರಿ ಚೆನ್ನದಾಸ ಸಮುದಾಯದ ಬಗ್ಗೆ ಅದ್ಯಯನ ಅಗತ್ಯತೆ ಇದೆ. ಹಾಗಾಗಿ ಮೊದಲಿಗೆ ದಾಸರು ಎಂದರೆ ಯಾರು? ಎಂಬ ಬಗ್ಗೆ ತಿಳಿದುಕೊಳ್ಳುವುದು ಅವಶ್ಯವಿರುತ್ತದೆ.

**ಅಲೆಮಾರಿ ಸಮುದಾಯದ ಲಕ್ಷಣಗಳು**

ಅಲೆಮಾರಿ ಸಮುದಾಯದವು ತನ್ನದೇ ಆದಂತಹ ವಿಶಿಷ್ಟ ಲಕ್ಷಣಗಳನ್ನು ಹೊಂದಿದ್ದು, ಅವುಗಳಲ್ಲಿ ಮುಖ್ಯವಾದ ಕೆಲವೊಂದನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

೧. ಅಲೆಮಾರಿಗಳು ಪಾರಂಪರಿಕವಾಗಿ ವನ್ಯಜೀವಿಗಳನ್ನು ಬೇಟೆ ಮಾಡುವುದು ಮತ್ತು ಪಳಿಗಿಸುವಿಕೆ ನಾಟಿವೈದ್ಯದ ಕಲೆಯನ್ನು ಕರಗತಮಾಡಿಕೊಂಡಿರುತ್ತಾರೆ. ಮತ್ತು ಕಲಾ ಪ್ರದರ್ಶನ, ದೈವಾರಾಧನೆ ಪ್ರದರ್ಶನಗಳ ಮೂಲಕ ತಮ್ಮ ಜೀವನವನ್ನು ಸಾಗಿಸುವರು. ಅಲ್ಲದೇ ಪಶುಪಾಲನೆಯ ಮೂಲಕ ತಮ್ಮ ಜೀವನವನ್ನು ಕಟ್ಟಿಕೊಂಡವರನ್ನು ಕಾಣಬಹುದು. ಉದಾಹರಣೆಯಾಗಿ ಚೆನ್ನದಾಸ ಸಮುದಾಯವು ಸಮಾಜಕ್ಕೆ ನೈತಿಕ ಮೌಲ್ಯಗಳನ್ನು ತತ್ವಪದಗಳ ಮೂಲಕ ಬಿತ್ತುತ್ತಾ ಸಮಾಜದ ಒಳಿತಿಗಾಗಿ ಊರೂರು ಅಲೆಯುತ್ತಾ ಅಲೆಮಾರಿಗಳಾದರು. ಇದೊಂದೇ ಸಮುದಾಯ ಅಲ್ಲದೇ ಹೆಳವರು, ಹಗಲುವೇಷ, ಹಕ್ಕಿ–ಪಿಕ್ಕಿ ಸಮುದಾಯ, ದಕ್ಕಲಿಗರು, ಮುಕ್ರಿ ಸಮುದಾಯ ಹೀಗೆ ಹಲವಾರು ಅಲೆಮಾರಿ ಸಮುದಾಯ ನೆಲೆ ಇಲ್ಲದೇ ಇಂದಿಗೂ ಅಲೆಯುತ್ತಿವೆ.

೨. ಅಲೆಮಾರಿ ಸಮುದಾಯಗಳಲ್ಲಿ ನಿರಾಡಂಬರ, ನಿಷ್ಕಪಟ, ಸಹಜ ಸರಳ ಬದುಕಿನ ನಿರಕ್ಷರಿಗಳಾಗಿದ್ದು ಇವರು ಬಂಡವಾಳ ಶೂನ್ಯ ಅಥವಾ ಅಲ್ಪ ಬಂಡವಾಳದ ಕಾಯಕ ಜೀವಿಗಳಾಗಿದ್ದಾರೆ.

೩. ಸರ್ವಚೇತನವಾದಿಗಳು, ಪ್ರಕೃತಿಯ ಅಗೋಚರ ಶಕ್ತಗಳ ಸಿದ್ಧಹಸ್ತರು.

೪. ಚೆನ್ನದಾಸ ಸಮುದಾಯವು ತಮ್ಮದೇ ಆದ ಮರಗು ಭಾಷೆಯಂತಹ ವಿಶಿಷ್ಟ ಭಾಷೆಯನ್ನು ಹೊಂದಿರುವುದನ್ನು ಕಾಣಬಹುದು.

೫. ಕಾಡುಮೇಡುಗಳಲ್ಲಿ, ಹಾಳು ಗುಡಿ ಗುಂಡಾರಗಳಲ್ಲಿ, ಬಯಲಿನ ಮರಗಿಡಗಳ ಕೆಳಗೆ ಅಥವಾ ನಗರಗಳ ಕೊಳಚೆ ಪ್ರದೇಶಗಳಲ್ಲಿ ಪ್ರತ್ಯೇಕ ಹಾಗೂ ತಾತ್ಕಲಿಕವಾಗಿ ವಾಸವಿರುತ್ತಾರೆ.

ಮೇಲಿನ ಲಕ್ಷಣಗಳನ್ನು ಇಂದಿಗೂ ಅಲೆಮಾರಿಗಳಲ್ಲಿ ಕಾಣಬಹುದಾಗಿದ್ದು, ಇದಕ್ಕೆ ಕಾರಣ ಅವರ ಅಕ್ಷರ ಜ್ಞಾನ ಕೊರತೆಯಿದೆ. ಇವರು ಕಡುಬಡವರಾಗಿದ್ದರೂ ಸರಳ ಜೀವಿಗಳಾಗಿದ್ದು, ಮೋಸದ ವ್ಯವಹಾರಗಳನ್ನು ಅರಿಯರು ಮತ್ತು ಸಮಾಜದಿಂದ ದೂರವಿದ್ದು ತಮ್ಮದೆಯಾದ ಭಾಷೆ, ರೂಢಿ, ಆಚಾರ-ವಿಚಾರಗಳು, ಸಂಪ್ರದಾಯ, ನ್ಯಾಯ ಪದ್ಧತಿ ಇತ್ಯಾದಿಗಳನ್ನು ಮುಂದುವರಿಸಿಕೊಂಡು ಬರುತ್ತಿವೆ. ಇಂತಹ ಅಲೆಮಾರಿ ಸಮುದಾಯದಲ್ಲಿ ಚೆನ್ನದಾಸ ಸಮುದಾಯವೂ ಒಂದು. ಇಲ್ಲಿ ದಾಸ ಪದದ ಅರ್ಥ ಮತ್ತು ಚೆನ್ನದಾಸ ಪದದ ಅರ್ಥಗಳನ್ನು ತಿಳಿದುಕೊಳ್ಳುವುದು ಅವಶ್ಯಕವಾಗುತ್ತದೆ. ಮೊದಲಿಗೆ ದಾಸ ಪದದ ಅರ್ಥವನ್ನು ಈ ಕೆಳಗಿನಂತೆ ನೋಡಬಹುದು.

### ೨.೨ ದಾಸ ಪದದ ಅರ್ಥ

ದಾಸ ಎಂದರೆ ಯಾರು? ಎಂಬ ಅರ್ಥಕ್ಕೆ ಹಲವಾರು ವಿದ್ವಾಂಸರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಧಾರ್ಮಿಕ ನೆಲೆಯಲ್ಲಿ ಮತ್ತು ಪ್ರಭುತ್ವದ ನೆಲೆಯಲ್ಲಿ ದಾಸ ಎಂದರೆ ಯಾರು ಎಂಬುದನ್ನು ನೋಡುವುದಾದರೆ ಧಾರ್ಮಿಕತೆ ನೆಲೆಗಟ್ಟಿನಲ್ಲಿ ದಾಸರು ಪುರಾತನ ಕಾಲದಿಂದಲೂ ಶೂದ್ರನ ಖ್ಯಾತ ವಂಶಸ್ಥರಾಗಿದ್ಧವರು ಮತ್ತು ಕಾಲಾನಂತರ ರಾಜರ ಆಳ್ವಿಕೆಯ ಕಾಲದಲ್ಲಿ ಇವರ ಸ್ಥಾನ ಅತ್ಯುನ್ನತವಾಗಿತ್ತು. ದಾಸರು ಕೆಳವರ್ಗದಲ್ಲಿದ್ದರೂ ಈ ವರ್ಗದಲ್ಲಿಯೇ ಉನ್ನತ ಸ್ಥಾನ ಇವರಾದಾಗಿತ್ತು. ದೇವರ ಸೇವೆಗೆ ಮೀಸಲಾದ ಇವರು ದೇವರ ಪದಗಳನ್ನು ಹಾಡುತ್ತಾ ಒಂದು ಕಡೆಯಿಂದ ಇನ್ನೊಂದು ಕಡೆಗೆ ಭಕ್ತಿಯನ್ನು ಜನರ ಮನಸ್ಸಿನಲ್ಲಿ ನೆಲೆಯೂರುವಂತೆ ಮಾಡಿ ಸಮಾಜಕ್ಕೆ ಜಾಗೃತಿ ನೀಡುವುದರ ಮೂಲಕ ಭಕ್ತಿ ಮಾರ್ಗದ ಹಾದಿಯನ್ನು ಅನುಸರಿಸಿದರು. ಹಾಗೂ ಪ್ರಭುತ್ವದ ನೆಲೆಯಲ್ಲಿ ಹೇಳುವುದಾದರೆ ಆಳುವ ವರ್ಗದಲ್ಲಿ ಸೇವಕನಾಗಿದ್ದವನು ದಾಸ ಎಂದೆನಿಸಿಕೊಂಡ. ಹೀಗೆ ದಾಸ, ದಾಸರಿ ಎಂಬ ಪದಕ್ಕೆ ಸೇವಕ ಎಂದು ಅರ್ಥೈಹಿಸಬಹುದಾಗಿದೆ. ದಾಸ, ದಾಸರಿ, ದಾಸರು ಎಂಬ ಪದಕ್ಕೆ ಹಲವಾರು ವಿದ್ವಾಂಸರು ಕೆಳಗಿನಂತೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವರು.

"ದಾಸ" ಪದದ ಬಗ್ಗೆ ಹಲವಾರು ವಿದ್ವಾಂಸರು ತಮ್ಮ ಅಭಿಪ್ರಾಯವನ್ನು ಈ ಕೆಳಗಿನಂತೆ ವ್ಯಕ್ತಪಡಿಸಿದ್ದಾರೆ. "ಥರ್ಸ್ಟನ" ಅವರು ತಮ್ಮ ಕೃತಿಯಲ್ಲಿ ದಾಸರಿಗಳ ಕುರಿತು "ದಾಸರಿಗಳು ಬೇರೆ ಬೇರೆ ಜಾತಿಗಳಿಗೆ ಗುರುಗಳಾಗಿರುವ ವೈಷ್ಣವ ಬ್ರಾಹ್ಮಣರ ಕೈ ಕೆಳಗಿನ ಸೇವಕರು" ಎಂದಿರುವರು.[೨]

"ಸ್ಟುವರ್ಟ" ಎಂಬ ವಿದ್ವಾಂಸ "ದಾಸರು ಸಿರಿವಂತ ಶೂದ್ರನ ಖ್ಯಾತ ವಂಶಜರು. ಅವನಿಗೆ ಮಕ್ಕಳಿಲ್ಲವಾದ್ದರಿಂದ ತನಗೆ ಮಕ್ಕಳಾದರೆ ಅವರಲ್ಲಿ ಒಬ್ಬನನ್ನು ದೇವರ ಸೇವೆಗೆ ಅರ್ಪಿಸುವೆನೆಂದು ಬೇಡಿಕೊಂಡ ಅನಂತರದಲ್ಲಿ ತನಗೆ ಹುಟ್ಟಿದ್ದ ಹಲವು ಮಕ್ಕಳಲ್ಲಿ ಒಬ್ಬನನ್ನು ದಾಸನು (ಸೇವಕ) ಎಂದು ಹೆಸರಿಟ್ಟು ದೇವರ ಸೇವೆಗೆ ಒಪ್ಪಿಸಿದನು. ಅಂದಿನಿಂದ ದಾಸನು ತನ್ನ ತಂದೆಯ ಆಸ್ತಿಯಲ್ಲಿ ತನ್ನ ಪಾಲನ್ನು ಕಳೆದುಕೊಂಡನಲ್ಲದೆ ಆತನ ಮಕ್ಕಳೂ ಆ ಹಕ್ಕಿಗೆ ಎರವಾಗಿ ಭಿಕ್ಷುಕರಾದರೂ ಅವರೇ ದಾಸರೆಂದನಿಸಿದರು".[೩]

ಥರ್ಸ್ಟನ್ ಅವರ ಪ್ರಕಾರ "ತೆಲುಗು, ಬಣಜಿಗ, ಹೊತಿಯ, ತಿಗಳ ಮತ್ತು ಒಕ್ಕಲಿಗ ಸಮುದಾಯದವರು ವೈಷ್ಣವ ದೀಕ್ಷೆ ಸ್ವೀಕರಿಸಿ ದಾಸರಿಗಳಾಗಿದ್ದಾರೆ" ಎಂದು ಹೇಳಲಾಗಿದೆ.[೪]

ಮತ್ತೊಂದು ಕಡೆ ದಾಸರಿಗಳಲ್ಲಿ ಆರು ಉಪಪಂಗಡಗಳಾದ ಬಲಿಜ, ಜಾನಪ್ಪ, ಪಲ್ಲಿ, ವಲ್ಲುವ ಗಂಗೆದ್ದುಲ ಮತ್ತು ಗೊಲ್ಲದಾಸರಿ ಇವೆ ಎಂದು ಹೇಳಲಾಗಿದೆ. ಹೊಸದಾಗಿ ದಾಸದೀಕ್ಷೆ ಪಡೆದು ದಾಸರಿಗಳು, ಮತ್ತೊಂದೆಡೆ ವಂಶಗತವಾಗಿ ಉಳಿದು ಬಂದಿರುವ ದಾಸರಿಗಳು ಎಂಬ ಎರಡು ಗುಂಪು ಇರುವುದಾಗಿ ತಿಳಿದು ಬರುತ್ತದೆ. ಆದರೆ ಇವರಿಬ್ಬರೂ ವೈಷ್ಣವ ಭಿಕ್ಷುಕರೇ ಆಗಿರುವರೆಂಬ ವಿವರಣೆ ಥಸ್ಟರ್ನ್ ಅವರ ಪ್ರಬಂಧದಲ್ಲಿದೆ.

ಸಯ್ಯದ್‌ಸಿರಾಜ್ ಉಲ್‌ಹಸನ್ ಅವರ ಪ್ರಕಾರ "ದಾಸರಿ" ಎಂದರೆ ವೈಷ್ಣವ ಭಿಕ್ಷುಕರ ವರ್ಗ. 'ದಾಸ' ಅಥವಾ 'ದೇವರ ಸೇವಕ' ಎಂಬುದರಿಂದ ಈ ಹೆಸರು ಬಂದಿದೆ ಎಂದಿರುವರು. 'ದಾಸರಿ', 'ದಾಸ' ಎಂಬ ಪದಗಳು ಸೇವಕ ಎಂಬರ್ಥವನ್ನು ಕೊಡುತ್ತದೆ. ವಿದ್ವಾಂಸರು ದೇವರ ಸೇವೆಗೆ ಮೀಸಲಾದವರು ದಾಸರು ಎಂದು ಗುರುತಿಸಿದ್ದಾರೆ. ಮೂಲತ: ತೆಲುಗಿನಿಂದ ನಾಮಾಂಕಿತಗೊಂಡ ಇವರಲ್ಲಿ ಬೇರೆ ಬೇರೆ ಸ್ವಗೋತ್ರ ಪಂಗಡಗಳಿರುವುದಾಗಿ ಹೇಳಿರುವ ಅವರು ಹತ್ತು ಒಳಪಂಗಡಗಳನ್ನು ಹೆಸರಿಸಿದ್ದಾರೆ ಅವು ಕೆಳಗಿನಂತಿವೆ.

ಬುಕ್ಕದಾಸರಿ, ಪಾಗದಾಸರಿ, ದಂಡೆದಾಸರಿ, ಭಗವತ ಅಥವಾ ಭುಟ್ಟೆದಾಸರಿ, ಕುಂಚಲೋಯ ಅಥವಾ ತೆಲಗ ದಾಸರಿ, ಚಿನ್ನದಾಸರಿ, ಕಂಗೆದ್ದುಲುದಾಸರಿ, ಮಾಲಾ ದಾಸರಿ, ಹೊಲೆದಾಸರಿ ಮತ್ತು ಚೆಂಚುದಾಸರಿ ಅಲ್ಲದೇ ಈ ದಾಸರಿಗಳಲ್ಲಿ ಹಲವಾರು ಹೊರಬಾಂಧವ್ಯ ವಿಭಾಗಗಳಿರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಪ್ರಾಚೀನ ಕಾಲದಿಂದಲೂ ದಾಸರ ಪರಂಪರೆ ಇದ್ದು, ವೈಷ್ಣವ ಕೈಕೆಳಗಿನ ದೇವರ ಸೇವಕರಾಗಿದ್ದರು. ಸಮಾಜದ ಅನಿಷ್ಟ ಪದ್ಧತಿಗಳನ್ನು ತಮ್ಮ ತತ್ವಪದಗಳ ಮೂಲಕ ಹೋಗಲಾಡಿಸಲು

ಬದುಕನ್ನೇ ಮೂಡಿಪಾಗಿಟ್ಟವರು ಈ ಚೆನ್ನದಾಸ ಸಮುದಾಯದವರು. ಇಂತಹ ವಿಶಿಷ್ಟವಾಗಿರುವ ಚೆನ್ನದಾಸರ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೨.೩ ಚೆನ್ನದಾಸ ಪದದ ಅರ್ಥ

ಚೆನ್ನದಾಸರ ಸಮುದಾಯಕ್ಕೆ ಪ್ರಾದೇಶಿಕವಾಗಿ ಕರ್ನಾಟಕದಲ್ಲಿ ಬೇರೆ, ಬೇರೆ, ಉಪನಾಮಗಳಿದ್ದರೂ ಈ ಸಮುದಾಯ ತನ್ನನ್ನು ಚೆನ್ನದಾಸರು ಎಂದೇ ಗುರುತಿಸಿಕೊಂಡಿದೆ. ಶೈಕ್ಷಣಿಕ ಮತ್ತು ಇತರ ದಾಖಲಾತಿಗಳಲ್ಲಿ ಚೆನ್ನದಾಸರ ಎಂದೇ ತನ್ನ ಜಾತಿಯನ್ನು ದಾಖಲುಗೊಳಿಸುತ್ತಾ ಬಂದಿದೆ. ಚೆನ್ನದಾಸರ ಪರ್ಯಾಯ ನಾಮಗಳಾದ ದಂಡಿಗೆ ದಾಸರ, ಜಂಬೂದಾಸರ, ಚಕ್ರವಾಧ್ಯದಾಸರ, ಹರಿದಾಸರ, ಶಂಖದಾಸರ, ಗೋಪಾಳ ಬುಟ್ಟಿದಾಸರ, ನಾಮದ ದಾಸರ, ಹೊಲೆಯದಾಸರ, ದಾಸರಿ, ಮಾಲದಾಸರ, ಆಟದ ದಾಸರ, ಇತ್ಯಾದಿ ಇದ್ದರೂ ಚೆನ್ನದಾಸರ ಎಂದೇ ಕರ್ನಾಟಕದಾದ್ಯಂತ ಈ ಸಮುದಾಯ ತನ್ನನ್ನು ಗುರುತಿಸಿಕೊಳ್ಳುತ್ತ ಬಂದಿದೆ. ಆದರೆ ಪ್ರಾದೇಶಿಕ ನೆಲೆಯಲ್ಲಿ ಸ್ಥಳೀಯವಾಗಿ ಇವರನ್ನು ಸಹಜವಾಗಿ (ಸರಳೀಕೃತ ನುಡಿ) ದಾಸರು, ದಾಸರ, ದಾಸರಿ ಎಂದೇ ಜನ ಬಳಕೆಯಲ್ಲಿ ಕರೆಯುತ್ತಾರೆ. ಈ ಸಮುದಾಯವೂ ಕೂಡ ಸಮಾಜಕ್ಕೆ ತನ್ನನ್ನು ಪರಿಚಯಿಸಿಕೊಳ್ಳುವಾಗ ಸರಳವಾಗಿ ಈ ಮೇಲಿನ ಪದಗಳನ್ನೇ ಹೇಳುತ್ತಾ ಬಂದಿರುವುದೂ ಇದೆ. ಇದರಿಂದಾಗಿ ಈ ಮೊದಲೇ ಪ್ರಸ್ತಾಪಿಸಿದಂತೆ ಅಧ್ಯಯನಕಾರರೆಲ್ಲ ಈ ಸಮುದಾಯವನ್ನು ದಾಸರು, ದಾಸರಿ ಎಂದೇ ದಾಖಲಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಚೆನ್ನದಾಸ ಸಮುದಾಯದ ಪದದ ವಿವೇಚನೆ ಮಾಡಿ ಈ ಪರ್ಯಾಯ ನಾಮಗಳ ಹಿನ್ನೆಲೆಯನ್ನು ದಾಸ ಪದದ ಅರ್ಥ ವಿವರಣೆಯ ಮೂಲಕ ಪರಿಶೀಲಿಸಲಾಗಿದೆ. 'ಚೆನ್ನು' ಎನ್ನುವ ವಾದ್ಯ ನುಡಿಸುವವರು ಚೆನ್ನದಾಸರು ಎನ್ನುವವರಿದ್ದಾರೆ. ಈ ಮೊದಲು ದಾಸಸಮುದಾಯದ ಒಂದು ಪಂಗಡ ಈ ಚೆನ್ನು ವಾದ್ಯವನ್ನು ಭಿಕ್ಷೆಗೆ ಹೋದಾಗ ಹಾಗೂ ಹನುಮಂತ ದೇವರ ಪೂಜೆಯ ಸಂದರ್ಭದಲ್ಲಿ ಬಳಕೆ ಮಾಡುತ್ತಿದ್ದಾರೆಂದು ಹೇಳಲಾಗುತ್ತಿದೆ. ತಾಮ್ರದ ಲೋಹದಿಂದ ಮಾಡಿರುವ ಸುಮಾರು ನಾಲ್ಕು ಅಡಿಗಳಷ್ಟು ಉದ್ದವಿರುವ ಗಾಳಿವಾದ್ಯವೇ ಚೆನ್ನು. ಇದನ್ನು ಭೋಂಕಿ ಎಂತಲೂ ಕರೆಯುವರು. ಅದನ್ನು ಊದಲು ಉಸಿರನ್ನು ಗಟ್ಟಿಯಾಗಿ ಒಳಜಗ್ಗಿಕೊಂಡು ಒತ್ತುಕೊಟ್ಟು ಜೋರಾಗಿ ಊದಬೇಕು. ಅಲ್ಲದೇ ಅದಕ್ಕೆ ಸ್ವರರಂಧ್ರಗಳೂ ಇರುವುದಿಲ್ಲ. ಹೀಗಾಗಿ ಅದರ ಬಳಕೆ ಅಪರೂಪ ಆದರೆ ಈ ವಾಧ್ಯವನ್ನು ನುಡಿಸುವವರನ್ನು ಚೆನ್ನದಾಸರು ಎಂದು ಕರೆದಿರುವ ಸಾಧ್ಯತೆಗಳಿವೆ. ಇದರ ಬಳಕೆ ಈಗ ಕಡಿಮೆಯಾಗಿದೆ. ಆದರೂ ಚೆನ್ನದಾಸ ಸಮುದಾಯದಲ್ಲಿ ಗಾಳಿವಾದ್ಯವನ್ನು ಬಳಸಿ ಹಾಡುವವರಿದ್ದಾರೆ. ಈ ವಾದ್ಯವು ದಾವಣಗೇರಿ ತಾಲೂಕಿನ ಮಳಲಕೇರೆ ಎಂಬ ಗ್ರಾಮದಲ್ಲಿ ಇದೆ.

ಒಂದು ಕಾಲದಲ್ಲಿ ವೈಷ್ಣವ ಧರ್ಮ ಪ್ರಚಾರಕರಾಗಿ ಊರೂರು ಅಲೆಯುತ್ತಾ ಬಂದವರು ಹಾಗೂ ಇಂದಿಗೂ ಸಹ ಧರ್ಮದ ಪ್ರಚಾರಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರನ್ನು ಚೆನ್ನದಾಸರು ಎಂತಲೂ ಕರೆಯುತ್ತಾರೆ. ಇಲ್ಲಿ ಚೆನ್ನ ಎಂಬ ಪದವು ಚೆನ್ನಾಗಿ ಹಾಡುವ ದಾಸರು

ಎಂದು ಸಹ ಅರ್ಥೈಹಿಸಬಹುದಾಗಿದೆ. ಎರಡು ಅಥವಾ ಮೂರು ತಲೆಮಾರುಗಳಿಂದ ನೆಲೆ ಇಲ್ಲದೆ ಊರಾ ಹೊರಗಡೆ ಟೆಂಟ್‌ಗಳಲ್ಲಿ ಜೀವನ ಸಾಗಿಸುತ್ತಿರುವ ಅಲೆಮಾರಿ ಚೆನ್ನದಾಸರು ಕೆಲವು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಮತ್ತು ಪ್ರಸ್ತುತ ಅಧ್ಯಯನವು ಅಲೆಮಾರಿ ಚೆನ್ನದಾಸರ ಸಂಕಥನ ಇರುವುದರಿಂದ ಅಧ್ಯಯನದ ದೃಷ್ಟಿಯಿಂದ ಎರಡು ರೀತಿಯಲ್ಲಿ ವಿಭಾಗಿಸಿಕೊಂಡಿದ್ದೇನೆ.

೧. ನೆಲೆನಿಂತ ಚೆನ್ನದಾಸ ಸಮುದಾಯ

೨. ನೆಲೆ ಇಲ್ಲದೇ ಇರುವ ಚೆನ್ನದಾಸ ಸಮುದಾಯ ಎಂದು ವಿಂಗಡಿಸಿಕೊಂಡು ಹೈದ್ರಾಬಾದ್ ಕರ್ನಾಟಕ ಪ್ರದೇಶ ವ್ಯಾಪ್ತಿಯಲ್ಲಿ ಬರುವ ಬಳ್ಳಾರಿ, ರಾಯಚೂರು, ಬೀದರ್, ಕೊಪ್ಪಳ, ಕಲ್ಬುರ್ಗಿ, ಯಾದಗಿರಿ ಜಿಲ್ಲೆಗಳಲ್ಲಿ ಬರುವ ಚೆನ್ನದಾಸರ ಸಮುದಾಯಗಳನ್ನು ಅಧ್ಯಯನಕ್ಕೆ ಒಳಪಡಿಸಿಕೊಂಡಿರುತ್ತೇನೆ. ಸದರಿ ಪ್ರಾದೇಶಿಕ ವ್ಯಾಪ್ತಿಯಲ್ಲಿ ಬರುವ ವಿವಿಧ ಕಲಾವಿದರು ಕಲಾನೈಪುಣ್ಯತೆಗೆ ಸಾಕ್ಷಿಯಾಗಿದ್ದಾರೆ.

ನನ್ನ ಅಧ್ಯಯನದ ವ್ಯಾಪ್ತಿಯಾದ ಹೈದ್ರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಚೆನ್ನದಾಸರ ಕುಟುಂಬಗಳು ವಾಸವಾಗಿದ್ದು, ಪರಾಂಪರಗತವಾಗಿ ಬಂದ ಕುಲವೃತ್ತಿಯಾದ ಹನುಮಂತ ದೇವರ ಚಾಕರಿ(ಸೇವೆ) ಮಾಡುವುದು, ಇನ್ನು ಕೆಲವು ಊರಲ್ಲಿ ಊರಾಡುವ ವೃತ್ತಿಯಾದ ವೆಂಕಟರಮಣ ಹೆಸರಿನಲ್ಲಿ ಭಿನ್ನಹ ನೀಡಿಸಿಕೊಂಡು ಬರುವುದನ್ನು ನೆಲೆ ನಿಂತ ಸಮುದಾಯಗಳು ಮಾಡಿದರೆ, ನೆಲೆ ಇಲ್ಲದೇ ಕುಟುಂಬಗಳು ತಮ್ಮ ಪರಾಂಪರಿಕ ಕಲೆಗಳ ಮೂಲಕ ಸಮಾಜಕ್ಕೆ ನೈತಿಕ ಮತ್ತು ಮೌಲ್ಯವನ್ನು ಸಾರುವಂತ ಅನುಭಾವಿಗಳು ಮತ್ತು ಆರೂಢರು, ಸಿದ್ಧರ ಶಿವಶರಣರು, ಹರಿದಾಸರು ರಚನೆಮಾಡಿರುವ ತತ್ವಪದಗಳನ್ನು ಹಾಡುತ್ತಾ ಊರೂರು ಸುತ್ತುತ್ತಾ ಜೀವನ ಸಾಗಿಸುವರು. ಇವರಿಗೆ ಸ್ವಂತ ಮನೆ ಇದ್ದರೂ ಹಿರಿಯರ ಕಟ್ಟುಪಾಡುಗಳಿಗೆ ಬದ್ಧರಾಗಿ ಹಳ್ಳಿಗಳಿಗೆ ಹೋಗುವರು. ಈ ದಾಸರ ಧಾರ್ಮಿಕ ಪದ್ದತಿಗಳು ಇತ್ತೀಚಿಗೆ ಕಡಿಮೆಯಾಗಿದೆಯಾದರೂ ಕೆಲವೊಂದು ಊರಿನ ಹಿರಿಯರು ಇಂದಿಗೂ ಮುಂದುವರೆಸಿಕೊಂಡು ಹೋಗುತ್ತಿರುವುದು ಕಂಡುಬರುತ್ತದೆ ಹಾಗೂ ೧೯೩೫ ಭಾರತ ಸರ್ಕಾರದ ಕಾಯ್ದೆಯಲ್ಲಿ ಚೆನ್ನದಾಸರ ಪದವನ್ನು ಇರುವುದು ಕಂಡುಬಂದಿದೆ.

**ಭಾರತ ಸಂವಿಧಾನದಲ್ಲಿ ಚೆನ್ನದಾಸ ಪದದ ಬಳಕೆ**

ಭಾರತ ಸರ್ಕಾರದ ೧೯೩೫ ರ ಕಾಯ್ದೆಯ ಅಧೀನದಲ್ಲಿರುವ (orders-in-council) ನ ಅಸ್ಪೃಶ್ಯರು ಪರಿಶಿಷ್ಟ ಮದ್ರಾಸ್ ರಾಜ್ಯದ ಕ್ರಮ ಸಂಖ್ಯೆ ೪೫ ರಲ್ಲಿ ಮಾಲದಾಸು (Maladasu) ಮುಂಬೈ ರಾಜ್ಯದ ಕ್ರಮ ಸಂಖ್ಯೆ ೫ ರಲ್ಲಿ ಚಕ್ರವಾಧ್ಯದಾಸರ್ (chakrawadhy-dasar) ಕ್ರಮಸಂಖ್ಯೆ ೧೦ರಲ್ಲಿ ಚೆನ್ನದಾಸರು (channadasaru) ಪದಗಳು ದಾಖಲಾಗಿವೆ.

ಭಾರತ ಸರ್ಕಾರದ (ಪರಿಶಿಷ್ಟ ಜಾತಿ) ಆದೇಶ ೧೯೩೬ರ ಪ್ರಕಾರ ಬೆಳಗಾವಿ, ಬಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಚೆನ್ನದಾಸರ್ (channadasaru) ಸಮುದಾಯವು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ದಾಖಲಾಗಿವೆ.

ಭಾರತ ಸಂವಿಧಾನ (ಪರಿಶಿಷ್ಟ ಜಾತಿ) ಆದೇಶ ೧೯೫೦ ರ ಪ್ರಕಾರ ಮುಂಬೈ ಪ್ರಕಾರ ಮುಂಬೈ ರಾಜ್ಯದಲ್ಲಿಯ ಪರಿಶಿಷ್ಟ ಜಾತಿ ಪಟ್ಟಿಯಲ್ಲಿಯ ಕ್ರಮ ಸಂಖ್ಯೆ ೯ ರಲ್ಲಿ ಚೆನ್ನದಾಸರ್ (channadasaru) ಮತ್ತು ಹೈದ್ರಾಬಾದ್ ರಾಜ್ಯದ ಅದೇ ಪಟ್ಟಿಯ ರ ಸಂಖ್ಯೆ ೧೩ ರಲ್ಲಿ ಹೊಲೆಯ ದಾಸರಿ (Holaya-dasari) **ಹಾಗೂ ಕ್ರಮಸಂಖ್ಯೆ ೧೮ ರಲ್ಲಿ ಮಾಲದಾಸರಿ** (Mala-dasari) ಪದಗಳು ದಾಖಲಾಗಿವೆ.

೧೯೫೬ ರಲ್ಲಿ ಭಾಷಾವಾರು ಪ್ರಾಂತ ರಚನೆ ಆದ ಮೇಲೆ ದಿನಾಂಕ: ೦೧-೦೫-೧೯೬೦ ರಿಂದ ಜಾರಿಯಾದಂತೆ ಬೆಳಗಾವಿ, ವಿಜಾಪುರ, ಧಾರವಾಡ ಜಿಲ್ಲೆಗಳಿಗೆ ಸೀಮಿತಗೊಂಡಂತೆ ಈ ಜಿಲ್ಲೆಗಳಲ್ಲಿಯ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮಸಂಖ್ಯೆ ೬ ರಲ್ಲಿ ಚೆನ್ನದಾಸರ್ ಅಥವಾ ಹೊಲೆಯ ದಾಸರ್ (chenna dasar or Holeya dasar) ಮತ್ತು ಬೀದರ್, ಗುಲ್ಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಿಗೆ ಸೀಮಿತಗೊಂಡಂತೆ ಆ ಜಿಲ್ಲೆಗಳಲ್ಲಿಯ ಪರಿಶಿಷ್ಟ ಜಾತಿ ಪಟ್ಟಿಯ ಕ್ರಮಸಂಖ್ಯೆ ೧೩ ರಲ್ಲಿ ಹೊಲಯದಾಸರಿ (Holaya-dasari ) ಮತ್ತು ಕ್ರಮಸಂಖ್ಯೆ ೧೮ ರಲ್ಲಿ ಮಾಲದಾಸರಿ (Mala dasari) ಎಂಬ ಪದಗಳು ದಾಖಲಾದವು.

ದಿನಾಂಕ: ೨೭-೦೭-೧೯೭೭ ರಂದು ಕರ್ನಾಟಕದಲ್ಲಿ ಈ ಸಮುದಾಯಗಳಿರುವ ಪ್ರಾದೇಶಿಕ ಮಿತಿಯನ್ನು ಸಡಿಲಿಸಿ ರಾಜ್ಯಕ್ಕೆ ವಿಸ್ತರಿಸಲಾಯಿತು. ಈಗ ಕರ್ನಾಟಕದ ಪರಿಶಿಷ್ಟ ಜಾತಿ ಮೀಸಲಾತಿ ಪಟ್ಟಿಯ ಕ್ರಮಸಂಖ್ಯೆ ೨೯ ರಲ್ಲಿ ಚೆನ್ನದಾಸರ್, ಹೊಲೆಯದಾಸರ್ (Chennadasar or Holeya dasari), ೪೫ ರಲ್ಲಿ ಹೊಲೆಯ ದಾಸರಿ(Holeya dasari) ಮತ್ತು ಕ್ರಮಸಂಖ್ಯೆ ೬೬ ರಲ್ಲಿ ಮಾಲದಾಸರಿ (Mala dasari) ಎಂಬ ಪದಗಳು ದಾಖಲಾಗಿವೆ. ಮಹಾರಾಷ್ಟ್ರದ ಅದೇ ಪಟ್ಟಿಯ ಕ್ರಮಸಂಖ್ಯೆ ೧೬ ರಲ್ಲಿ ಚೆನ್ನದಾಸರ್, ಹೊಲೆಯದಾಸರ್, ಹೊಲೆಯ ದಾಸರಿ(Chennadasar or Holeya dasar, Holeya dasari) ಕ್ರಮ ಸಂಖ್ಯೆ ೪೦ ರಲ್ಲಿ ಮಾಲದಾಸರಿ (Mala dasari) ಎಂಬ ಪದಗಳು ದಾಖಲಾಗಿವೆ. ಆಂದ್ರಪ್ರದೇಶದ ಅದೇ ಪಟ್ಟಿಯ ಕ್ರಮ ಸಂಖ್ಯೆ ೨೭ ರಲ್ಲಿ ಹೊಲೆಯ ದಾಸರಿ(Holeya dasari), 36 ರಲ್ಲಿ ಮಾಲದಾಸರಿ (Mala dasaru) ಮತ್ತು ಕ್ರಮ ಸಂಖ್ಯೆ ೩೭ ರಲ್ಲಿ ಮಾಲದಾಸು (Mala dasu) ಎಂಬ ಪದಗಳು ದಾಖಲಾಗಿವೆ. ಗುಜರಾತ್ ರಾಜ್ಯದ ಅದೇ ಪಟ್ಟಿಯ ಕ್ರಮ ಸಂಖ್ಯೆ ೭ ರಲ್ಲಿ ಚೆನ್ನದಾಸರ್, ಹೊಲೆಯದಾಸರಿ(Chennadasar, Holeya dasari) ಎಂಬ ಪದಗಳು ದಾಖಲಾಗಿವೆ.

### ೨.೪ ಕರ್ನಾಟಕ ಚೆನ್ನದಾಸರ ಭೌಗೋಳಿಕ ನೆಲೆಗಳು

ಕರ್ನಾಟಕದ ಮಟ್ಟಿಗೆ ಎಲ್ಲ ಜಿಲ್ಲೆಗಳಲ್ಲೂ ಕಂಡುಬರುವ ಚೆನ್ನದಾಸರು, ಬೆಳಗಾವಿ, ಕೋಲಾರ, ಕೊಪ್ಪಳ, ಬಳ್ಳಾರಿ, ದಕ್ಷಿಣ ಕನ್ನಡ, ಬಿಜಾಪುರ, ದಾವಣಗೇರಿ, ಬಾಗಲಕೋಟೆ, ಉಡುಪಿ, ರಾಯಚೂರು ಜಿಲ್ಲೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿದ್ದರೆ, ಬೆಂಗಳೂರು, ಗದಗ, ಧಾರವಾಡ ಜಿಲ್ಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಸಿಗುವರು ಹಾಗೂ ಚೆನ್ನದಾಸ ಸಮುದಾಯವು ೨೦೦೧ ಮತ್ತು ೨೦೦೭

ಜನಗಣತಿಯ ಸಮೀಕ್ಷೆಯ ಪ್ರಕಾರ ಒಟ್ಟು ಜನಸಂಖ್ಯೆ ೫೭,೪೭೨ ಇದೆ ಮತ್ತು ಕರ್ನಾಟಕ ಜಿಲ್ಲೆಗಳಾದ ಉತ್ತರ ಕನ್ನಡದಲ್ಲಿ ೫೦ ಕ್ಕಿಂತ ಒಳಗೆ ಚೆನ್ನದಾಸರ ನೆಲೆಗಳು, ೫೧-೧೦೦ ಹಾವೇರಿಯಲ್ಲಿ, ರಾಯಚೂರಿನಲ್ಲಿ ೧೦೧-೨೦೦, ಉಡುಪಿ, ಬೆಂಗಳೂರು ನಗರದಲ್ಲಿ ೨೦೧-೩೦೦, ವಿಜಾಪುರ, ಗುಲ್ಬರ್ಗಾ, ಧಾರವಾಡ, ೩೦೧-೪೦೦, ದಕ್ಷಿಣ ಕನ್ನಡ, ಕೊಪ್ಪಳ, ಬಳ್ಳಾರಿ ೪೦೧-೫೦೦ ಕ್ಕಿಂತ ಜಾಸ್ತಿ ಕುಟುಂಬಗಳು ಹಾಗೂ ಬಾಗಲಕೋಟೆ, ಗದಗ, ಬೆಳಗಾವಿ, ಕೋಲಾರ ಜಿಲ್ಲೆಗಳಲ್ಲಿ ಚೆನ್ನದಾಸ ಸಮುದಾಯದ ನೆಲೆಗಳು ಅಥವಾ ಕುಟುಂಬಗಳನ್ನು ಕಾಣಬಹುದು. ಹಾಗೂ ಕರ್ನಾಟಕದ ಎಲ್ಲಾ ಜಿಲ್ಲೆಯಲ್ಲಿನ ಸದರಿ ಸಮುದಾಯದ ಕುಟುಂಬಗಳು ನೆಲೆಸಿರುವವರ ವಿವರಗಳನ್ನು ಈ ಕೆಳಗಿನಂತಿದೆ.

**ಜಿಲ್ಲೆಗಳ ಹೆಸರು**

**೧. ದಾವಣಗೇರಿ:** ಜಿಲ್ಲೆಯ ಹರಪನಹಳ್ಳಿ ತಾಲೂಕಿನ ಸಾಸ್ವಿಹಳ್ಳಿ, ತೊಗರಿಕಟ್ಟೆ, ಕಲ್ಲಹಳ್ಳಿ, ಹುಲಿಕಟ್ಟೆ, ಜಂಬೂಲಿಂಗನಹಳ್ಳಿ, ಚೆನ್ನಗಿರಿ ತಾಲೂಕಿನ ಹಿರೆಕೋಗಲೂರ, ಕಾಕನೂರು, ಕೊಂಡದಹಳ್ಳಿ, ಕೋಟೆಹಳ್ಳಿ, ತ್ಯವಣೆಗೆ, ದಾವಣಗೇರೆ ತಾಲೂಕಿನ ಹೊಸಕುಂದವಾಡ, ಕುಂದವಾಡ, ಲೊಕ್ಕಕೆರೆ, ಮಾಳಲಕೆರೆ, ಮುದಹದಡಿ, ಹರಿಹರ ತಾಲೂಕಿನ ಹರಳಹಳ್ಳಿ, ಕಂಬಳೂರು, ಮಿಟ್ಲಕಟ್ಟೆ, ಜಗಳೂರು ತಾಲೂಕಿನ ತಾರೆಹಳ್ಳಿಗಳಲ್ಲಿ ಚೆನ್ನದಾಸ ಸಮುದಾಯಗಳು ಕಂಡು ಬರುತ್ತಾರೆ.

**೨. ಹಾವೇರಿ:** ರಾಣೆಬೆನ್ನೂರು ತಾಲೂಕಿನ ರಾಣೇಬೆನ್ನೂರು, ಗುಡಗೂರು, ಬೇಲೂರು, ಬುಡಪನಹಳ್ಳಿ, ಗುತ್ತಲ, ಸವಣೂರು, ಜೇಕಿನಕಟ್ಟೆ, ಶಿಗ್ಗಾವಿ ತಾಲೂಕಿನ ಶಿಗ್ಗಾವಿ, ಹೊಟ್ಟೂರ, ಬ್ಯಾಡಗಿ ತಾಲೂಕಿನ ಬ್ಯಾಡಗಿ, ಹಾನಗಲ್, ಹಿರಿಖಕೆರೂರು, ಚಿನ್ನಮುಳಗುಂದ

**೩. ಬೆಳಗಾವಿ:** ಜಿಲ್ಲೆಯ ಅಥಣಿ ತಾಲೂಕಿನ ಲಕ್ಷ್ಮೀಪುರ, ಬಡಚಿ, ಸಂಕೋನಟ್ಟಿ, ಬೆಳಾವಿ ತಾಲೂಕಿನ ಎಂಬಾಳ, ಹೊನಗಾ, ಕನಬುರ್ಗಿ, ಬೆಳಗಾವಿ, ಚಿಕ್ಕೋಡಿ ತಾಲೂಕಿನ ಹೀರೆಕೋಡಿ, ಗೋಕಾಕ್ ತಾಲೂಕಿನ ಕಲ್ಲೋಳ್ಳಿ, ಮುಸಗುಪ್ಪಿ, ರಂಗಾಪುರ, ಉದಗಟ್ಟಿ, ಹೊಸಟ್ಟಿ, ಕೌಜಲಗಿ, ಲೋಳಸೂರ, ಹುಕ್ಕೇರಿ ತಾಲೂಕಿನ ಗುಡಸ, ಕೊಟಬಾಗಿ, ಅರ್ಜುನವಾಡ, ಕುರಣಿ, ರಾಮದುರ್ಗ ತಾಲೂಕಿನ ಬಟಕುರ್ಕಿ, ಬೀಡಕಿ, ಚಿಕೋಪ್ಪ, ಗೊನ್ನಾಗರ, ಚಿಂಚಕಂಡಿ, ಲಹಾಳ, ನಂದಿಹಾಳ, ಹುಲಕುಂದ, ಜಾಲಿಕಟ್ಟಿ, ಕಲಮಾಡ, ಮುದೇನೂರು, ಮುಳ್ಳೂರು, ರಆಮದುರ್ಗ, ಸಾಲಳ್ಳಿ, ಸಾಲಾಪೂರ, ಸುರೆಖಾನ, ರಾಯಭಾಗ ತಾಲೂಕಿನ ಬ್ಯಾಕುಡ, ಖಣದಾಳ, ಪರಮಾನಂದವಾಡಿ, ರಾಯಭಾಗ, ಯಲ್ಲಾರಟ್ಟಿ ಬಂಗ್ಲೆ, ಹೊಸಕೋಟೆ, ಕಮಕೇರಿ, ಕುನ್ನಾಳ, ಚಿಂಚಲಿ, ದಾಸರವಾಡಿ, ಸವದತ್ತಿ ತಾಲೂಕಿನ ಸವದತ್ತಿ, ಸೊಪ್ಪಡ್ಲ, ಯರಗಟ್ಟಿ, ರೈನಾಪುರ, ಅರಟಗಲ್ಲು, ಹಂಚಿನಾಳ, ಕಣದಾಳ, ಮರಕುಂಬಿ, ಕುರುಬಗಟ್ಟಿ, ಶಿರಸಂಗಿ, ಹಾರೋಗೇರಿ, ಹಿಡಕಲ್ ಟಿ.ಸಿ, ಜಲಾಲಪುರ, ಕಂಕಣವಾಡಿ, ಸಿದ್ಧಾಪುರ, ಕುಡಚಿ, ಮೇಕಾಳಿ, ಮುಗಳಖೋಡ, ನಿಲಜಿ, ಸವಸುದ್ಧಿ, ಯಬ್ರಟ್ಟಿ.

೪. **ಕಲಬುರ್ಗಿ:** ಕಲಬುರ್ಗಿ ತಾಲೂಕಿನ ಮೈಲಾರಲಿಂಗ ದೇವಸ್ಥಾನ, ಜೇವರ್ಗಿ ತಾಲೂಕಿನ ರಾಂಪುರ, ಸೇಡಂ ತಾಲೂಕಿನ ಬಿಬ್ಬೋಳ್ಳಿ,

೫. **ಕೋಲಾರ:** ಬಂಗಾರಪೇಟೆ ತಾಲೂಕಿನ ರಾಮಲಿಂಗಾಪುರ, ತಟ್ನಹಳ್ಳಿ, ಸಕ್ಕನಹಳ್ಳಿ, ವರದಾಪುರ, ಗುವ್ವಲಹಳ್ಳಿ, ಬೋಯಿಲೂರು, ವಟ್ಟಗಲ್ಲು, ದಾಸೇಗೌಡನೂರು, ಕೋಡಿಗೆನಹಳ್ಳಿ, ಬೇತಮಂಗಲ, ಕಾಮಸಂದ್ರ, ಬೈಲೂರು, ಕೋಲಾರ ತಾಲೂಕಿನ ಅರಹಳ್ಳಿ, ಮಣಿಯಾರನಹಳ್ಳಿ, ಮಾಲೂರು ತಾಲೂಕಿನ ಸಂತಿ ಮೈದಾನ, ಮುಳಬಾಗಿಲು ತಾಲೂಕಿನ ಪಿಚ್ಚಗುಂಟ್ಲಹಳ್ಳಿ, ಸಾಮರೆಡಿಹಳ್ಳಿ, ವೀರಸಂದ್ರ, ಅಗ್ರಹಾರ, ಮೋಪರಹಳ್ಳಿ, ಮೈಲಾಪುರ, ಮಲ್ಲನಾಯಕನಹಳ್ಳಿ, ಬೈರಾಕೂರು, ರಾಮನಾಥಪುರ, ಕಾಡೆನಹಳ್ಳಿ, ಮುತ್ಯಾಲಪೇಟೆ, ಮಾಲೂರು ತಾಲೂಕಿನ ನಗರ ಪ್ರದೇಶ.

೬. **ಕೊಪ್ಪಳ:** ಕೊಪ್ಪಳ ತಾಲೂಕಿನ ಹನುಕುಂಟಿ, ಗಂಗಾವತಿ ತಾಲೂಕಿನ ಹುಲಿಹೈದರ, ಗಂಗಾವತಿ, ಕುಷ್ಟಗಿ ತಾಲೂಕಿನ ಬಂಡಿ, ಹಿರೆಹಳ್ಳಿ, ಕುದುರೆಮೋತಿ, ಯಲಬುರ್ಗಾ.

೭. **ರಾಯಚೂರು:** ರಾಯಚೂರು ತಾಲೂಕಿನ ಯಾಪಲದಿನ್ನಿ, ರಾಯಚೂರು, ಅಸ್ಕಿಹಾಳ, ದೇವದುರ್ಗ ತಾಲೂಕಿನ ಮಾನ್ವಿ ಇತ್ಯಾದಿ, ಸಿಂಧನೂರು ತಾಲೂಕಿನ ಗೊರೆಬಾಳ, ಗೊರೆಬಾಳ. ಗೋರೆಬಾಳ ಕ್ಯಾಂಪ್, ಹಿರೇಬೆಡಗಿ, ಚಿಕ್ಕಬೆಡಗಿ, ಲಿಂಗಸೂಗೂರು ತಾಲೂಕಿನ ಮಸ್ಕಿ, ಲಿಂಗಸೂರು.

೮. **ವಿಜಯಪುರ:** ಇಂಡಿ ತಾಲೂಕಿನ ಬಬಲಾದಿ, ಬರಡೋಳ, ಚವಡಿಹಾಳ, ಇಂಡಿ, ಸಿಂದಗಿ ತಾಲೂಕಿನ ವಿಬೂತಿಹಳ್ಳಿ.

೯. **ಉಡುಪಿ:** ಜಿಲ್ಲೆಯ ಕಾರ್ಕಳ ತಾಲೂಕಿನ ಬರೆ ದರ್ಖಾಸ್ತು, ಎದು, ಮಾಚಜೆ, ಕಂಬಳದಡ್ಡ, ಕುಂದಾಪುರ ತಾಳುಕಿನ ಕೊಡ್ಲಿಡಿ, ತೊಂಬಟ್ಟು, ತಗರಸೆ, ವರಸ, ಕುಂಗನಾಡಿ, ಗಂಗೊಳ್ಳಿ, ಮಾವಿನಮನೆ, ಹಕಲಾಡಿ, ಜನ್ನಾಡಿ, ಕೊರಗಿ, ಗುಂಡ್ರಿ, ಮುಕ್ಕೊಡು, ಕೊಲ್ಲೂರು, ಮರವಂತೆ, ಹೊಸುರು, ಕುಂದಾಪುರ. ಉಡುಪಿ ತಾಲೂಕಿನ ದೊಡ್ಡನಗುಡ್ಡೆ, ಗುಂಡಿಬೈಲು, ಹಾವಂಜೆ, ಕಲ್ಯಾಣಪುರ, ಕೆರಳಕಲ್ ಬೆಟ್ಟುನೆಜರು, ನೆಜರು, ಸಂತೆಕಟ್ಟೆ, ಕಟಪಾಡಿ, ಕೊಳಲಗೇರಿ, ಬಂತ್ರಕಲ್ಲು, ಮುಲ್ಕಿ, ಅತ್ರಾಡಿ, ಹೆರ್ಗಾಪರ್ಕಳ, ಸೆಟ್ಟಿಬೆಟ್ಟು, ಬಂಗರಬೈಲು, ಬುಕ್ಕಿಗುಡ್ಡೆ, ಕಾರ್ಡೆ, ಕುಂಜೆಕಟ್ಟೆ, ಉಪ್ಪಿನಕೊಟೆ, ಉಡುಪಿ, ಕರ್ಜೇ.

೧೦. **ಯಾದಗಿರಿ:** ಜಿಲ್ಲೆಯ ಶಹಪೂರ ತಾಳುಕಿನ ದೇವಿನಗರ, ರಬನಹಳ್ಳಿ, ಕರಹಳ್ಳಿ, ಖಾನಾಪುರ, ಶಹಪೂರು, ಶೇರಾಪೂರ ತಾಲೂಕಿನ ಹುಣಸಿಗಿ, ಕೊಡೆಕಲ್, ಯಾದಗಿರಿ ತಾಲೂಕಿನ ಗುರುಮಿಟಕಲ್.

೧೧. **ಧಾರವಾಡ:** ತಾಲೂಕಿನ ಬ್ಯಾಗಟ್ಟಿ, ಧಾರವಾಡ, ಹಳಿಯಾಳ, ಹುಬ್ಬಳ್ಳಿ, ರಾಯರ ಹುಬ್ಬಳ್ಳಿ, ಗಿರಿಯಾಲ, ಮಾವನೂರ, ಹುಲಗೂರ, ಕುಂದಗೋಳ, ನವಲಗುಂದ ತಾಲೂಕಿನ

ಅಡನೂರು, ದಾಟ್ನಾಳ, ದುಂದುರ, ಹಳ್ಳಿಕೇರಿ, ಹೇಬ್ಬಾಳ, ಇಬ್ರಾಹಿಂಪುರ, ಕೊಂಡಿಕೊಪ್ಪ, ನಲವಡಿ, ನಾವಳ್ಳಿ, ಪಡೆಸೂರ, ತಡಹಾಳ, ಶಿರಗುಪ್ಪ.

೧೨. **ಗದಗ:** ಗದಗ ತಾಳುಕಿನ ಅಸುಂಡಿ, ಬಳಗಾನೂರ, ಬೆಳಹೋಡ, ಬಿಂಕದಕಟ್ಟಿ, ದುಂದೂರ, ಗದಗ, ಎಸ್.ಎಸ್.ವೆಂಕಾಟಪುರ, ಹರ್ಲಾಪುರ, ಹಿರೇಕುಪ್ಪ, ಹುಲಕೋಟೆ, ಕದಡಿ, ಕಳಾಸಪುರ, ಲಕ್ಕುಂಡಿ, ಮುದಗಾನೂರ, ಶಂಭಾಪುರ, ನರಸಪುರ, ಸಿದ್ಧರಾಮೇಶ್ವರ ನಗರ, ಮುಂಡರಗಿ ತಾಲೂಕಿನ ಹಾರೋಗೇರಿ, ಹೆಸರೂರು, ಜಂತಲಿಶಿರೂರು, ಕದಮಪುರ, ಗುಲಗಂದಿ, ಹದ್ಲಿ, ಜಗಾಪುರ, ಕಪಲಿ, ಕೊಣ್ಣೂರ, ನಾಗನೂರ, ನರಗುಂದ, ಶಿರೊಳ್ಳಿ, ಶಿರೋಳ, ರೋಣ ತಾಲೂಕಿನ ತುಪ್ಪದ ಕುರಹಟ್ಟಿ, ಬಸರಗೋಡ, ಬೆಳವಣಿಕೆ, ಚಿಕ್ಕ ಅಳಗುಂಡಿ, ಗಜೇಂದ್ರಗಡ, ಗಾಡಗೊಳ್ಳಿ, ಹೊಳೆಅಲೂರ, ಹೊಳೆ ಹಡಗಲಿ, ಹೊಳೆಮಣ್ಣರ, ಹುಲ್ಲೂರ, ಹಿರೆಅಳಗುಂಡಿ, ಕರಮಡಿ, ಕೊತಬಾಳ, ಕುರಹಟ್ಟಿ, ಕೌಜಗೇರಿ, ಮಲ್ಲಾಪುರ, ಮಾರನಬಸರಿ, ನರೆಗಲ್ಲ, ರೋಣ, ಶಾಮತಗೇರಿ, ಸೋಮನಕಟ್ಟಿ, ಗುಳಗುಂಡಿ, ಗಜೇಂದ್ರಗಡ, ಶಿರಹಟ್ಟಿ ತಾಲೂಕಿನ ಹೊಳೆ ಇಟಗಿ, ಕೊಂಚಗೇರಿ, ಲಕ್ಷ್ಮೇಶ್ವರ, ಮಾಗಡಿ, ಒಡವೆಹೊಸೂರ.

೧೩. **ದಕ್ಷಿಣ ಕನ್ನಡ:** ಬಂಟ್ವಾಳ ತಾಲೂಕಿನ ಗುಂಡ್ಯ, ಬೆಳ್ಳಾಲು, ಇಡ್ಕಿದು, ಕೈರಂಗಳ, ನಂದ್ರಬೆಟ್ಟು, ಕರಂಬಾರು, ಆಮ್ಟಾಡಿ, ಮೊಡಂಕಾಪು, ಬೆಳ್ತಂಗಡಿ ತಾಲೂಕಿನ ಅಳದಂಗಡಿ, ಧರ್ಮಸ್ಥಳ, ಕುಕ್ಕಿಲ, ಮಾಲಾಡಿ, ಪಟ್ರಮೆ, ಬಿರ್ ಮಜಲು, ತಣ್ಣೀರುಪಂತ, ನೀರಚಿಲುಮೆ.

೧೪. **ಮಂಗಳೂರು:** ತಾಲೂಕಿನ ಅಡ್ಡೂರು, ತಾರೆತೋಟ, ಮರೋಲಿ, ತಾರೆಗುಡ್ಡೆ, ಬೋಳಿಯಾರು, ಎಕ್ಕಾರು, ತೆಂಕ ಎಕ್ಕಾರು, ಕೊಂಬಾಡಿ, ಐಕಳ, ಪೆರ್ಮುದೆ, ಮೆನಂಗಲ, ಬಜಪೆ, ಸ್ವಾಮಿಲಪದವು, ಕಾವೂರು, ಜ್ಯೋತಿನಗರ, ಕೆಮ್ರಾಲ್, ಕಿಲ್ಪಾಡಿ, ಮೆನ್ನಬೆಟ್ಟು, ಕೊಂಡೆಮೂಲ, ಉಲ್ಲಂಜೆ, ಕಟೀಲು, ಕೋಟೆಕಾರ್, ಸೋಮೇಶ್ವರ, ಬಗಂಬಿಲ, ಮಡ್ಯಾರು, ಪಚ್ಚನಾಡಿ, ಕುಡುಪು, ಕುಲಶೇಖರ ಪದವು, ಪೆರ್ ಮನ್ನೂರು, ಶ್ರೀಮಂತೂರು, ತೋಕೂರು, ಅತ್ತೂರು, ಕೊಪ್ಪಳಕಾಡು, ಪದವಿನಂಗಡಿ, ಕೊಂಚಾಡಿ, ಪಕ್ಷಿಕೆರೆ, ಶಿನಪ್ಪಯ್ಯಕೋಡಿ, ಬಿಜಾಪುರ ಕಾಲೊನಿ, ಮೂಲ್ಕಿ, ಪಡುಪೆರಾರು, ಮಿಜಾರು, ಕುಪ್ಪೆಪದವು, ಮಣೇಲು, ಪೊಂಪೆ, ಮೂಡಪೆರಾರು, ಅದ್ಯಪಾಡಿ, ಬೈಲು, ಪುತ್ತೂರು ತಾಲೂಕಿನ ಕಬಕ, ಮುರ, ಕೊಯಿಲಾ, ಬನ್ನೂರು, ಪುತ್ತೂರು, ಕಸಬಾ, ದೇಲಂಪಾಡಿ, ಬೊಳುವಾರು, ಪೆರ್ಲಂಪಾಡಿ, ಪುಳಿಂಚ, ಸವಣೂರು, ಬಾಣಪದವು, ಮಾಡಾವು, ಕುಂಟ್ಯಾನ, ಸುಳ್ಯ ತಾಲೂಕಿನ ಬೆಳ್ಳಾರೆ

೧೫. **ಚಿಕ್ಕಬಳ್ಳಾಪುರ:** ಬಾಗೇಪಲ್ಲಿ ತಾಲೂಕಿನ ಬಾಗೇಪಲ್ಲಿ, ಚಾಕವೇಲು, ಕೃಷ್ಣಪುರ, ಬೆಳ್ಳುರು, ವಂಗಸಂದ್ರ, ಚಿಂತಾಮಣಿ ತಾಲೂಕಿನ ಕಾಮನಗರಪಳ್ಳಿ, ಚಿಂತಾಮಣಿ, ಕಂಬಲಪಲ್ಲಿ, ನಲ್ಲರಪಳ್ಳಿ, ಗೌರಿಬಿದನೂರು ತಾಲೂಕಿನ ಗಂಗಸಂದ್ರ, ಮಣಿಯಾರನಹಳ್ಳಿ, ಅರಹಳ್ಳಿ.

೧೬. **ಬಳ್ಳಾರಿ:** ಜಿಲ್ಲೆಯ ಬಳ್ಳಾರಿ ತಾಲೂಕಿನ ಶ್ರೀಧರಗಡ್ಡೆ, ಮೋಕಾ, ಗಾದಿಗನೂರು, ದೇವಿನಗರ, ವೀರಾಪುರ, ಕುಡುತಿನಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ತಾಲೂಕಿನ ಬನ್ನಿಮಟ್ಟಿ, ಕತ್ತೆಬೆನ್ನೂರು, ಹೊಸಪೇಟೆ ತಾಲೂಕಿನ ಮಲಪನಗುಡಿ, ಕಮಲಾಪುರ, ಮೆಟ್ರಿ, ದೇವಲಾಪುರ, ತಿರುಮಲ ನಗರ, ಕಂಪ್ಲಿ, ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿ, ಉಜ್ಜಿನಿ, ಸೊಮನಹಳ್ಳಿ, ಸಂಡೂರು ತಾಲೂಕಿನ ಬಂಡ್ರಿ, ತಾರಾನಗರ, ಮಾವಿನಹಳ್ಳಿ, ಬಳ್ಳಾರಿ ತಾಲೂಕಿನ ಕುರುಗೋಡು, ಅನ್ನಪೂರ್ಣಶ್ವರಿ ಕ್ಯಾಂಪ್.

೧೭. **ಬೆಂಗಳೂರು ನಗರ:** ಕೆ.ಆರ್.ಪುರಂ ತಾಲೂಕಿನ ಮಲ್ಲಸಂದ್ರ, ರಾಜಾಜಿನಗರ, ಚಂದ್ರಲೇಔಟ್, ಅರುಂಧತಿ ನಗರ, ಗಾಂಧಿನಗರ, ಭಟ್ರಹಳ್ಳಿ, ಬನಶಂಕರಿ, ದೇವಸಂದ್ರ, ಹೊಸಕೋಟೆ, ಜಯಮಹಲ್, ಕೋಣನಕುಂಟೆ, ಕೆಂಗೇರಿ, ನಾಗದೇವನಹಳ್ಳಿ, ಮರಿಯಮ್ಮನಪಾಳ್ಯ, ಪೀಣ್ಯ, ವರ್ತೂರು, ವಿಲ್ಸನ್ ಗಾರ್ಡನ್, ಯಲಹಂಕ, ದೇವನಹಳ್ಳಿ ತಾಲೂಕಿನ ಕಮ್ಮನಹಳ್ಳಿ, ದೇವನಹಳ್ಳಿ, ನೆಲಬಾಗಿಲು.

೧೮. **ಬಾಗಲಕೋಟೆ:** ಜಮಖಂಡಿ ತಾಲೂಕಿನ ರಬಕವಿ, ತೆರದಾಳ, ಅಸಂಗಿ, ಬಾದಾಮಿ ತಾಲೂಕಿನ ದಾನಶಿರೂರು, ಗುಳೇದಗುಡ್ಡ, ಹಂಸನೂರು, ಹವಳಕೋಡ, ಹಿರೇಬೂದಿಹಾಳ, ಹೂಲಗೇರಿ, ಜಮ್ಮನಕಟ್ಟೆ, ಕೆಲವಡಿ, ಕೋಟೆಕಲ್, ಕುಟನಗೇರಿ, ನಸಬಿ, ತೆಗ್ಗಿ, ತೊಗುಣಸಿ, ಮುರುಡಿ, ಬಾಗಲಕೋಟೆ ತಾಲೂಕಿನ ತುಳಸಿಗೇರಿ, ಮುಧೋಳ ತಾಲೂಕಿನ ಡವಳೇಶ್ವರ, ಮದಬಾವಿ, ಮಹಾಲಿಂಗಾಪುರ, ಬೀಳಗಿ ತಾಲೂಕಿನ ಬಾವಲತ್ತಿ, ತಾತರಕಿ.[೬]

ಹೀಗೆ ಕರ್ನಾಟಕದ್ಯಾಂತ ಕಂಡುಬರುವ ಚೆನ್ನದಾಸ ಸಮುದಾಯಗಳು ವಾಸವಾಗಿದ್ದು, ಪ್ರಾದೇಶಿಕ ವ್ಯಾಪ್ತಿಯಲ್ಲಿ ಭಿನ್ನ ಹೆಸರುಗಳಿಂದ (ಅಡ್ಡ ಹೆಸರುಗಳಿಂದ) ಸಂಭೋದಿಸುತ್ತಾರೆ. ಆಂದ್ರ ಮೂಲದಿಂದ ಬಂದವರು ಹೈದ್ರಾಬಾದ್ ಹೆಚ್ಚಾಗಿ ಕಂಡುಬಂದರೆ, ಉಳಿದ ಜಿಲ್ಲೆಗಳಲ್ಲಿ ಪೂರ್ವಿಕರಿಂದ ನೆಲೆಸಿದಂತ ಚೆನ್ನದಾಸ ಕುಟುಂಬಗಳನ್ನು ಕಾಣುತ್ತೇವೆ. ಇಂತಹ ಕುಟುಂಬಗಳು ಹೆಚ್ಚಾಗಿ ಪೂರ್ವಿಕರಿಂದ ಬಳುವಳಿಯಾಗಿ ಬಂದ ಆಸ್ತಿಗಳನ್ನು ಹೊಂದಿದ್ದು, ಕೃಷಿಕರಾಗಿ ಜೀವನ ಸಾಗಿಸುತ್ತಿದ್ದಾರೆ. ಇನ್ನೂ ಹಿಂದಿನ ಕಾಲದ ರಾಜರು ಕೊಟ್ಟ ಕಂಚಿನ ಪತ್ರದಂತಹ ಪುರಾವೆ ಇಟ್ಟುಕೊಂಡು ಕುಲಕಸುಬನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಇಂತಹ ಕುಟುಂಬಗಳು ಆಧುನಿಕ ಸಮಾಜಕ್ಕೆ ಸವಾಲಾಗಿದ್ದಾರೆ. ಹಾಗೂ ಆಯಾ ಪ್ರಾದೇಶಿಕವಾಗಿ ಈ ಸಮುದಾಯವನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಿದ್ದು, ಅವುಗಳನ್ನು ಚೆನ್ನದಾಸರ ಉಪನಾಮಗಳೆಂದು ಕರೆಯಲಾಗಿದೆ. ಹಿಂದಿನ ಕಾಲದಲ್ಲಿ ವೈಷ್ಣವ ಧರ್ಮದ ಪ್ರಚಾರಕರಾಗಿದ್ದರಿಂದ ದಾಸರು, ದಾಸರಿ, ದಾಸರು ಎಂದೆಷ್ಟೇ ಕರೆಯುತ್ತಿದ್ದರು. ರೂಢಿಗತವಾಗಿ ಇವೇ ಹೆಸರುಗಳು ಮುಂದುವರೆದುಕೊಂಡು ಬಂದಿದ್ದು, ದಾಖಲಾತಿಗಳಲ್ಲಿ ದಾಸರು, ದಾಸರ, ದಾಸರಿ ಎಂದು ನಮೂದಿಸಿದ್ದರಿಂದ ಬಹುದೊಡ್ಡ ಸಮಸ್ಯೆಯಾಗಿ ಪರಿಣಮಿಸಿದ್ದು, ಸರ್ಕಾರದ ಯಾವುದೇ ಸೌವಲತ್ತುಗಳು ಇವರಿಗೆ ತಲುಪುತ್ತಿಲ್ಲ.

ಹಾಗಾದರೆ ಕರ್ನಾಟಕದ್ಯಂತ ಕಂಡುಬರುವ ಚೆನ್ನದಾಸರ ಉಪನಾಮಗಳು ಯಾವುವು ಎಂಬುದನ್ನು ತಿಳಿದುಕೊಳ್ಳುವುದು ಮುಖ್ಯ.

### ೨.೫ ಚೆನ್ನದಾಸ ಸಮುದಾಯದ ಉಪನಾಮಗಳು

ಒಂದು ಜನಾಂಗ ಅಥವಾ ಸಮುದಾಯಗಳು ಒಂದೇ ರೀತಿಯಾಗಿ ಕಾಣಿಸುತ್ತಿದ್ದರೂ ಅವುಗಳ ನಡುವೆ ವಿಭಿನ್ನ ಸಂಪ್ರದಾಯಗಳನ್ನು ಕಾಣಬಹುದಾಗಿದೆ. ಹಿಂದಿನ ಕಾಲದಿಂದಲೂ ಪ್ರತಿಯೊಂದು ಸಮುದಾಯಗಳು ಕವಲೊಡಯುತ್ತಾ ಬೇರೆ ಬೇರೆ ಕಲೆಗಳನ್ನು ಕಲಿತುಕೊಂಡು ತಮ್ಮದೇ ರೀತಿಯಲ್ಲಿ ಬದುಕನ್ನು ಸಾಗಿಸುವರು. ಪ್ರಸ್ತುತ ಚೆನ್ನದಾಸರ ಸಮುದಾಯಗಳಲ್ಲಿ ಹಲವು ಉಪನಾಮಗಳಿಂದ ಕರೆದುಕೊಂಡರೂ, ಅವುಗಳಲ್ಲಿಯ ಸಂಪ್ರದಾಯ, ಆಚಾರ–ವಿಚಾರಗಳು ಒಂದೇ ಆಗಿವೆ. ಸಮಾಜಕ್ಕೆ ನೈತಿಕ ಮೌಲ್ಯಗಳನ್ನು ತತ್ವಪದಗಳು, ಗೀಗೀ ಪದಗಳು, ಲಾವಣಿಗಳು, ಜನಪದ ಹಾಡುಗಳ ಮೂಲಕ ಜನರ ಮನಸ್ಸಿನಲ್ಲಿ ಉಳಿದುಕೊಂಡಿದ್ದಾರೆ. ಇಂಥ ಸಮುದಾಯದಲ್ಲಿ ಕಂಡುಬರುವ ಕೆಲವು ಉಪನಾಮಗಳು ಈ ಕೆಳಗಿನಂತಿವೆ.

#### ೨.೫.೧. ಹೊಲೆಯದಾಸರು

ಏಕತಾರಿ, ದಮ್ಮಡಿ, ಕೈಚಿಟಿಕಿಗಳನ್ನು ಹಿಡಿದು ಹಾಡುತ್ತಾ ಮನೆ ಮನೆ ತಿರುಗಿ ಸುಗ್ಗಿಯಲ್ಲಿ ಕಣಗಳಿಗೆ ಅಡ್ಡಾಡಿ, ಗೋಪಾಲ ಬುಟ್ಟಿಯಲ್ಲಿ ಭಿಕ್ಷೆ ಎತ್ತಿ ಉಪಜೀವನ ಸಾಗಿಸುವ ದಾಸ ಪಂಗಡವನ್ನು ಗೋಪಾಲಬುಟ್ಟಿ ದಾಸರು, ಹೊಲೆದಾಸರು ಎಂದು ಕರೆಯಲಾಗುತ್ತಿದ್ದಿತು ಎಂದು ಬಿ ಬಿ ಹೆಂಡಿಯವರು ಉಲ್ಲೇಖಿಸಿದ್ದಾರೆ. 'ಹೊಲೆ' ಶಬ್ಧ ಪೊಲ ಎನ್ನುವ ಹಳಗನ್ನಡ ಪದದಿಂದ ನಿಷ್ಪನ್ನವಾಗಿದೆ. 'ಪೊಲ' ಹೊಲ ಎನ್ನುವ ಅರ್ಥ ನೀಡುತ್ತದೆ. ಹೊಲದ ಕೆಲಸ ಅಥವಾ ಕೃಷಿಕ ಮೂಲದವರು ಎನ್ನುವ ಅರ್ಥ ನೀಡುತ್ತದೆ. "ಮಾನವಶಾಸ್ತ್ರ ಸಂಸ್ಕೃತಿಯಲ್ಲಿ ಬರುವ ಆಹಾರೋತ್ಪಾನೆಯ ಆರಂಭದ ಹಂತದಲ್ಲಿ ಆಗ ಹೊಲೆಯ ಎಂಬ ಹೆಸರಿಲ್ಲದ ಅವನು ತನ್ನ ಪೂರ್ವಜರ ಬಳುವಳಿಯಾಗಿ ನೆಲದ ಆ ಹಕ್ಕು ಪಡೆದಿದ್ದಾನೆ."[೭]

"ಹೊಲೆಯ ದಾಸರಿ ವೃತ್ತಿ ಜೀವನ ವಿಧಾನಮು" ಎನ್ನುವ ತೆಲುಗಿನ ಕೃತಿಯಲ್ಲಿ ಹೀಗೆ ಹೇಳಲಾಗಿದೆ. "ಹೊಲೆಯದಾಸರು ಎಂಬ ಶಬ್ಧ ಕರ್ನಾಟಕದ ಕನ್ನಡ ಮಾತೃಭಾಷೆಯ ಕಾರಣದಿಂದಾಗಿ ಬಂದಿದೆ. 'ಹೊಲ' ಎಂದರೆ ಕೃಷಿಗಾಗಿ ಬಳಸುವ ಭೂಮಿ ಎಂದರ್ಥ. ಅಂದರೆ ಭೂಮಿಗೆ ಸೇವಕನಾಗಿ, ದಾಸನಾಗಿ ಇರುವುದರಿಂದ ಹೊಲದದಾಸ, ಹೊಲೆದಾಸ, ಹೊಲೆಯದಾಸ ಎನ್ನಲಾಗಿದೆ.

#### ೨.೫.೨. ದಂಡಿಗೆದಾಸರು

ಊರಾಡುವ ವೃತ್ತಿಗೆ ಹೋದಾಗ ಹರಿಯ ಕೀರ್ತನೆಗಳನ್ನು ಶೃತಿಯಾಗಿ ಹಾಡಲು ಬಳಸುವ ತಂತಿವಾಧ್ಯ ದಂಡಿಗೆಯನ್ನು ಪ್ರಮುಖವಾಗಿ ಬಳಸುವುದರಿಂದ ಈ ಗುಂಪಿನವರನ್ನು ದಂಡಿಗೆದಾಸರೆಂದು ಕರೆಯುತ್ತಾರೆ. ಯುದ್ಧ ಸಂದರ್ಭದಲ್ಲಿ ಸೈನ್ಯ (ದಂಡಿ/ದಂಡು)ದೊಡನೆ ಸೈನಿಕರ ಮನರಂಜನೆಗಾಗಿ ದಂಡಿಗೆ ವಾಧ್ಯ ನುಡಿಸಿ ಹಾಡುತ್ತಾ ಕುಣಿಯುತ್ತಿದ್ದರಿಂದ ದಂಡಿಗೆ ದಾಸರೆಂದು ಕರೆಯಲಾಗಿದೆ.

ಮತ್ತು ಈ ಗುಂಪಿನವರಿಗೆ ಕಾಂಚೀಪುರದ ಅರಸರು ದಂಡೆ, ತಾಳ, ತಂಬೂರಿಗಳನ್ನು ಸನ್ಮಾನವಾಗಿ ನೀಡಿದ್ದಕ್ಕೆ ಇವರನ್ನು ದಂಡಿಗೆದಾಸರು ಎಂದು ಕರೆದಿರುವ ಬಗ್ಗೆ ಪ್ರತೀತಿಯಿದೆ.[೮] ಇದಕ್ಕೆ ಪೂರಕವೆಂಬಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಳ್ಳಾರಿ ತಾಲೂಕಿನ ಗೋನಾಳ ಗ್ರಾಮದಲ್ಲಿ ಕಂಚಿನ ಪತ್ರಯೊಂದು ಸಿಕ್ಕಿದ್ದು, ಅದರಲ್ಲಿ ದಾಸರು ಹೇಗೆ ಜೀವನ ಸಾಗಿಸಬೇಕು ಎಂಬುದಾಗಿ ಇತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ಇದ್ದು, ಈ ಪತ್ರವನ್ನು ಕಾಂಚೀಪುರದಿಂದ ಕಳುಹಿಸಿದ್ದು, ಅದರಲ್ಲಿ ಹರಿದಾಸರು ಹೀಗೆ ಇರಬೇಕೆಂದು ಪತ್ರದ ಮೂಲಕ ತಿಳಿಸಿರುತ್ತಾರೆ. ಇವರೂ ಇಂದಿಗೂ ಕರ್ನಾಟಕದ ಕೆಲವು ಜಿಲ್ಲೆಗಳಲ್ಲಿ ವಾಸವಾಗಿರುತ್ತಾರೆ. ಬೆಳಗಾವಿ, ಬಾಗಲಕೋಟೆ, ಗದಗ, ಹಾವೇರಿ, ಧಾರವಾಡ, ದಾವಣಗೇರಿ, ಮುಂತಾದ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ.

### ೨.೫.೩. ಮಾಲಾದಾಸರು

ಮಾಲದಾಸರಿ ಎನ್ನುವುದು ದಾಸವರ್ಗಗಳಲ್ಲಿ ಒಂದು ಕಟ್ಟಕಡೆಯ ಕುಲವೆಂಬ ಮಾತುಗಳಿವೆ. ಆದರೆ ಇಲ್ಲಿನ ಮಾಲದಾಸ ಮಹಾವಿಷ್ಣು ಭಕ್ತ. ಕುರಂಗುಡಿಯ ಆರ್ಚಾಮೂರ್ತಿ ಅವನ ಇಷ್ಟದೈವ. ಅವನ ಹೆಗ್ಗಳಿಕೆಯಿಂದ ಬ್ರಹ್ಮರಾಕ್ಷಸನಿಗೂ ಮುಕ್ತಿ ದೊರೆಯಿತು ಎನ್ನುವ ಕಥೆ "ಮಾಲದಾಸರಿ ಕಥೆ ಎಂಬ ಕಾವ್ಯದಲ್ಲಿ ಚಿತ್ರಣಗೊಂಡಿದೆ.[೯] ಈ ಮಾಲದಾಸರಿಯ ವಂಶವೇ ಮಾಲದಾಸರಿಗಳು ಎಂಬ ಪ್ರತೀತಿ ಇದೆ. ಇದು ವಿಜಯನಗರ ಅರಸು ಶ್ರೀ ಕೃಷ್ಣದೇವರಾಯ ರಚಿಸಿರುವ ಅಮುಕ್ತ ಮೌಲ್ಯದ ಎಂಬ ತೆಲುಗು ಕಾವ್ಯದಲ್ಲಿ ಮೂಡಿಬಂದಿದೆ. ಕ್ರಿಶ ೬-೭ ನೇ ಶತಮಾನದ ಆಳ್ವಾರರಿಗೆ ಸಂಬಂದಿಸಿದ ಕಥೆಗಳಲ್ಲಿ ವಿಷ್ಣು ಭಕ್ತ ಪೆರಿಯಾಳ್ವಾರರ ಕುರಿತು ಕೃತಿಯಲ್ಲಿ ಬಂದಿದೆ.

ಕರ್ನಾಟಕದ್ಯಾಂತ ಹರಡಿಕೊಂಡಿರುವ ಚೆನ್ನದಾಸ ಸಮುದಾಯ ಸಮುದಾಯವು ಉಪನಾಮಗಳಿಂದ ಬೇರೆ ಬೇರೆ ಹೆಸರುಗಳಿಂದ ಗುರುತಿಸಿಕೊಂಡರೂ ಸಂಪ್ರದಾಯ, ಆಚಾರ-ವಿಚಾರಗಳಲ್ಲಿ ಒಂದೇ ಆಗಿವೆ ಹಾಗೂ ಆಯಾ ಪ್ರಾದೇಶಿಕತೆ ಸ್ವಲ್ಪ ಭಿನ್ನತೆಯನ್ನು ಕಾಣಬಹುದು. ಕೆಲವೊಂದು ಜಿಲ್ಲೆಗಳಲ್ಲಿ ವೆಂಕಟೇಶ ದೇವರ ಭಕ್ತರಾಗಿದ್ದು, ದೇವರ ಆರಾಧಕರಾಗಿ ಶನಿವಾರದಂದು ವೆಂಕಟೇಶನ ಹೆಸರಿನಲ್ಲಿ ಮನೆ ಮನೆಗೆ ಹೋಗಿ ಭಿನ್ನಾಹ ನೀಡಿಸಿಕೊಂಡು ಬರುತ್ತಾರೆ. ವೆಂಕಟೇಶ ದೇವರ ನಾಮಸ್ಮರಣೆ ಮಾಡುತ್ತಾರೆ. ಇನ್ನೂ ಕೆಲವು ಜಿಲ್ಲೆಗಳಲ್ಲಿ ಆಂಜನೇಯ(ಹನುಮಂತ ದೇವರು) ಆರಾಧಕರಾಗಿ ನಾಮಸ್ಮರಣೆ ಮಾಡುತ್ತಾರೆ. ಆಯಾ ಜಿಲ್ಲೆಯಲ್ಲಿ ಕಂಡುಬರುವ ಪ್ರಸಿದ್ದ ಹನುಮಂತ ದೇವರಿಗೆ ಚೆನ್ನದಾಸರು ನಡೆದುಕೊಳ್ಳುವುದು ಕಂಡುಬರುತ್ತದೆ. ಉದಾಹರಣೆಯಾಗಿ ಆಂದ್ರದ ಗಡಿ ಭಾಗದಲ್ಲಿ ಹೆಚ್ಚಾಗಿ ವೆಂಕಟೇಶ ಆರಾಧಕರನ್ನು ನೋಡುತ್ತೇವೆ ಹಾಗೂ ಉಳಿದಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಕನಕಗಿರಿ ತಿಮ್ಮರಾಯ, ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲೂಕಿನ ಕದರಮಂಡಲಗಿಯ ಹನುಮಪ್ಪ (ಭಾಂತ್ರೇಶ), ಬಾಗಲಕೋಟೆಯ ತುಳಸಿಗೇರಿಯ ಆಂಜನೇಯ ಸ್ವಾಮಿ, ಬಿಜಾಪುರ ಜಿಲ್ಲೆಯ ನಿಡಗುಂದಿಯ ಯಲಗೂರು ಆಂಜನೇಯ ಸ್ವಾಮಿ

ದೇವಸ್ಥಾನ ಸುತ್ತಮುತ್ತ ಊರುಗಳಲ್ಲಿ ನೆಲೆಸಿರುವ ಚೆನ್ನದಾಸರ ಕುಟುಂಬಗಳು ಆಂಜನೇಯ ಸ್ವಾಮಿಯ ಆರಾಧಕರಾಗಿ ತಮ್ಮ ಕುಲವೃತ್ತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಕದರ ಮಂಡಲಗಿ ದೇವಸ್ಥಾನದಲ್ಲಿ ಶನಿವಾರದಂದು ಗೋಪಾಲಬುಟ್ಟಿ, ಶಂಖ, ಜಾಗಟೆ ಇಟ್ಟು ಪೂಜೆ ಮಾಡುವುದನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಇನ್ನೂ ಕೆಲವೊಂದು ಹಳ್ಳಿಗಳಲ್ಲಿ ಹನುಮಂತ ಗುಡಿಯ ಪೂಜಾರಿಗಳಾಗಿ ಸೇವೆ ಮಾಡುತ್ತಿದ್ದಾರೆ. ಉದಾಹರಣೆಯಾಗಿ ಗದಗ ಜಿಲ್ಲೆಯ ಬಿಂಕದಕಟ್ಟಿ ಗ್ರಾಮದಲ್ಲಿ ಹನುಮಂತ ದೇವರ ಗುಡಿಯ ಪೂಜಾರಿ ಇರುವುದನ್ನು ನೋಡಬಹುದು. ಚೆನ್ನದಾಸ ಸಮುದಾಯವು ತನ್ನದೇ ಆದ ಕುಲಲಾಂಛನಗಳನ್ನು ಹೊಂದಿದ್ದು, ಅವುಗಳ ಬಗೆಗಿನ ವಿವರಣೆ ಈ ಕೆಳಗಿನಂತಿದೆ.

### ೨.೬ ಚೆನ್ನದಾಸರ ಕುಲಲಾಂಛನಗಳು

ಧಾರ್ಮಿಕ ವೃತ್ತಿಗಾಯಕರಾದ ಇವರು ತಮ್ಮ ಕುಲ ಲಾಂಛನಗಳಿಂದ ತಮ್ಮ ಬದುಕನ್ನು ಕಟ್ಟಿಕೊಂಡಿದ್ದಾರೆ. ತಂಬೂರಿ(ಏಕತಾರಿ), ಶಂಖ, ಗಂಟೆ–ಜಾಗಟೆ, ಗರುಢಗಂಭ, ಚಿಕಿಟಿ ತಾಳ, ಬಾಂಕಿಗಳಂತಹ ಕುಲ ಲಾಂಛನದ ಪರಿಕರಗಳನ್ನು ಇಂದಿಗೂ ಕಾಣಬಹುದಾಗಿದ್ದು, ಇವುಗಳ ವಿವರಣೆ ಈ ಕೆಳಗಿನಂತಿದೆ.

**೧)ತಂಬೂರಿ(ಏಕಾತಾರಿ)ಕಾಯ:**

ಈ ತಂಬೂರಿಯ ಬಗ್ಗೆ ಬಸವಣ್ಣನವರು

ಎನ್ನ ಕಾಯವ ದಂಡಿಗೆಯ ಮಾಡಯ್ಯ
ಎನ್ನ ಶಿರವ ಸೋರೆಯ ಮಾಡಯ್ಯ
ಎನ್ನ ನರವ ತಂತಿಯ ಮಾಡಯ್ಯ
ಎನ್ನ ಬೆರಳ ಕಡ್ಡಿಯ ಮಾಡಯ್ಯ

ಬಸವಣ್ಣನಕ ಏಕತಾರಿ ವಾದ್ಯವನ್ನು ಶರೀರಕ್ಕೆ ಹೋಲಿಸಿ ಭಕ್ತಿಯನ್ನು ಹೊರಹಾಕಿದ್ದಾರೆ. ಜನಪದ ತಂತಿವಾಧ್ಯದ ಪ್ರಕಾರಗಳನ್ನು ಈ ಮೇಲಿನ ವಚನದಲ್ಲಿ ಮೂಡಿ ಬಂದಿದೆ. ಜನಪದ ಕವಿ ಎಂದೆನಿಸಿಕೊಂಡ ಸರ್ವಜ್ಞನು ಕೂಡ ಏಕತಂತ್ರೀಯ ವೀಣೆಯ ಹಿರಿಮೆಯನ್ನು ತನ್ನ ವಚನದಲ್ಲಿ ಎತ್ತಿ ಹಿಡಿದಿದ್ದಾನೆ.ಅವರ ಈ ಕೆಳಗಿನ ವಚನದಲ್ಲಿ ವಾಧ್ಯದ ಉಲ್ಲೇಖವನ್ನು ನಾವು ಕಾಣುತ್ತೇವೆ.

ತಂತಿವಾಧ್ಯವು ಲೇಸು, ಮಂತ್ರಿಯಾ ಕಳೆ ಲೇಸು
ಯಂತ್ರ ವಾಹಕನ ದಯ ಲೇಸು ಜಗದಿಸ್ವ
ತಂತ್ರವೇ ಲೇಸು ಸರ್ವಜ್ಞ

ಸರ್ವಜ್ಞ ಕವಿಗೆ ಬಂಧನ ಸಲ್ಲದು ಎಂದೆನಿಸುತ್ತದೆ. ಸ್ವತಂತ್ರವೇ ಲೇಸು ಪರ ತಂತ್ರ ಬೇಡ

ಎಂದು ಏಕತಂತ್ರೀಯ ವೀಣೆಯನ್ನು ಹೋಲಿಕೆ ಕೊಟ್ಟು ಹೇಳುವಲ್ಲಿ ನಮಗೆ ಜನಪದವಾದ್ಯದ ಉಲ್ಲೇಖ ದೊರೆಯುತ್ತದೆ. ವಚನಕಾರರು ಸಮಾಜ ಸುಧಾರಣೆಯ ಸಲುವಾಗಿ ವಚನಗಳು ರಚಿಸಿ ಶ್ರಮಿಸಿದರೆ ಅವರಂತೆ ಸಮಾಜ ಸುಧಾರಣೆಯಲ್ಲಿ ಪ್ರಯತ್ನಿಸಿದ ದಾಸರು ಕೀರ್ತನೆಗಳನ್ನು ರಚಿಸಿ ಚೆನ್ನದಾಸರು ಸಂಗೀತ ಮಾಧ್ಯಮದ ಮೂಲಕ ಭಕ್ತಿಗೀತೆಗಳನ್ನು ಪ್ರಚಾರ ಮಾಡಿದರು. ತಂಬೂರಿಯನ್ನು ಹಿಡಿದು ಹಾಡುತ್ತಾ ದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಕನಕದಾಸರು ತಮ್ಮ ದೇವಿ ನಮ್ಮ ದ್ಯಾವರ ಬಂದಾರು (ಜವರೇಗೌಡ ಸಂ:೧೯೮೭:೨೭) ಎಂಬ ಪದ್ಯದಲ್ಲಿ ಡೊಳ್ಳು ವಾದ್ಯವನ್ನು ಮರೆಸಿದ್ದಾರೆ.

> "ಡೊಳ್ಳಿನ ಮೇಲೆ ಭರಮಪ್ಪ ಕೈ ಹಾಕ್ಯಾನು
> ತಾಳವ ಶಿವನಪ್ಪ ತಟ್ಯಾನ್ನ
> ಒಳ್ಳೊಳ್ಳೆ ಪದಗಳು ಹನುಮಪ್ಪ ಹಾಡ್ಯಾನು
> ಚೆಲುವ ಕನಕಪ್ಪ ಕುಣಿದಾನು"[೧೦]

ಹೀಗೆ ದಾಸರು ಸ್ವತಃ ಹಾಡುಗಾರರಲ್ಲದೆ ವಾದ್ಯಗಳನ್ನು ನುಡಿಸುವುದರಲ್ಲಿ ಪರಿಣಿತರು, ತಾಳಕ್ಕೆ ತಕ್ಕಂತೆ ಹಾಡು ಹೇಳಿ ಆನಂದಿಸಿ ಸಮಾಜ ಸುಧಾರಣೆಯೊಂದಿಗೆ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಲ್ಲದೆ ತಮ್ಮ ಕುಲಾಂಛನಗಳ ಮಾಹಿತಿಯನ್ನು ಹೆಚ್ಚಿಸಿದ್ದಾರೆ.

"ಗುರು ನಾಮಮೃತವ ತುಂಬ್ಯಾದ ಎನ್ನುವಲ್ಲಿ ದೇಹವೇ ಏಕತಾರಿ ಜೀವವೇ ಬಿದಿರು ಕೋಲು, ಮಾಯದ ತಂತಿ ಬಿಗಿದು ಅಜ್ಞಾನದ ಬೆಳಕು ಜಡೆದಿವೆ" ಎಂದು ಎಕತಾರಿತ್ವ ಪದಗಳನ್ನು ಹಾಡುತ್ತಾರೆ. ತಂತಿ ವಾದ್ಯಗಳಲ್ಲಿ ಏಕತಾರಾ ಬಹು ಸರಳವಾದ ವಾದ್ಯವಾಗಿದೆ. ಒಂದೇ(ಎಕೆ) ತಂತಿ (ತಾರಾ) ಇರುವುದರಿಂದ ಏಕೆತಾರಾ<ಏಕತಾರಿ ಆಗಿರಬಹುದು.

ಮೂರು ಅಡಿ ಉದ್ದವಿರುವ ಮತ್ತು ಎರಡು ಅಡಿ ದಪ್ಪವಿರುವ ಬಿದಿರಿನ ದಂಡಕ್ಕೆ ಒಂದರಿಂದ ಒಂದೂವರೆ ಅಡಿ ವ್ಯಾಸವುಳ್ಳ ಕುಂಬಳ ಕಾಯಿಯನ್ನು ತೆಗೆದುಕೊಮಡು ಅದರ ಒಳಭಾಗವನ್ನು ಸ್ವಚ್ಚಗೊಳಿಸಿ ಎರಡು ಬದಿಗೆ ನೇರವಾಗಿ ರಂಧ್ರವನ್ನು ತೆಗೆಯಲಾಗಿರುತ್ತದೆ. ಆ ರಂದ್ರದಲ್ಲಿ ಬಿದಿರಿನ ಕೋಲನ್ನು ಸೇರಿಸಲಾಗಿರುತ್ತದೆ. ಸೋರೆ ಬುರುಡೆಯ ಮಧ್ಯ ಭಾಗದಲ್ಲಿ ಸ್ವಲ್ಪ ದೊಡ್ಡದಾದ ರಂಧ್ರವನ್ನು ಹಾಕಿ ಅದರ ಮೇಲ್ಬಾಗದಲ್ಲಿ ಹದ ಮಾಡಿದ ಉಡದ ಇಲ್ಲವೆ ಆಡಿನ ಚರ್ಮವನ್ನು ಅಂಟಿಸಲಾಗಿರುತ್ತದೆ. ಆ ಚರ್ಮದ ಮಧ್ಯ ಭಾಗದಲ್ಲಿ ಒಡೆದ ಮಣ್ಣಿನ ಮಡಿಕೆಯ ಭೋಕಿಯನ್ನು (ಹಂಚನ್ನು) ಕೂಡಿಸಲಾಗುತ್ತದೆ. ಸೋರೆ ಬುರುಡೆಯ ಕೆಳ ಭಾಗದಲ್ಲಿರುವ ರಂಧ್ರದಲ್ಲಿ ತಂತಿ(ತಾರಾ)ಯನ್ನು ಪೋಣಿಸಿ ಮಣ್ಣಿನ ಮಡಿಕೆಯ ಹಂಚಿನ ಮೇಲಿಂದ ಎಳೆದುಕೊಂಡು, ಆ ದಾಂಡಿಯ ಮುಂದುಗಿರುವ ಕಟ್ಟಿಗೆಯ ಚಿಕ್ಕದಾದ ಅಡ್ಡ ಗೂಟಕ್ಕೆ ಬಿಗಿಯಲಾಗಿರುತ್ತದೆ. ಈ ರೀತಿಯಾಗಿ ಈ ತಂಬೂರಿಯನ್ನು ತಯಾರಿಸಲಾಗಿರುತ್ತಾದೆ.

ಇಂದಿಗೂ ಈ ಸಮುದಾಯದ ಮನೆಗಳಲ್ಲಿ ಕಾಣಬಹುದಾಗಿದ್ದು, ತಂಬೂರಿ ಹಾಡುಗಾರರು ಬಾಗಲಕೋಟೆ ಜಿಲ್ಲೆಯಲ್ಲಿ ಕಂಡುಬರುತ್ತಾರೆ.

**ಶಂಖ:** ಶಂಖವು ನಿಸರ್ಗದ ಕೊಡುಗೆಯಾಗಿದ್ದು ರಾಮಾಯಣ ಮಹಾಭಾರತದಿಂದಲೂ ಇದರ ಬಳಕೆಯಿದೆ. ಈ ಸಮುದಾಯದವರು ಮನೆ ಮನೆಗೆ ದವಸ ಧಾನ್ಯಗಳನ್ನು ಸಂಗ್ರಹಿಸಲು ಹೋದಾಗ ಶಂಖವನ್ನು ಊದಿ ತಾವು ಬಂದ ಸೂಚನೆಯನ್ನು ತಿಳಿಸುತ್ತಾರೆ. ಹಾಗೂ ಊರ ಹನುಮಪ್ಪ ಜಾತ್ರೆಗಳಲ್ಲಿ ಶಂಖ ಜಾಗಟೆ ಗರುಡಗಂಭ ಹಿಡಿದುಕೊಂಡು ಭಕ್ತರ ಮನೆಗೆ ಹೋಗುವ ಸಂಪ್ರದಾಯ ಇಂದಿಗೂ ಇದೆ.

**ಗಂಟೆ–ಜಾಗಟೆ:** ಸಾಮಾನ್ಯವಾಗಿ ಕಂಚಿನ ವೃತ್ತಾಕಾರವಾದ ೧೦ ಅಂಗುಲ ವ್ಯಾಸವುಳ್ಳದ್ದಾಗಿದ್ದು ಇದರ ಮೇಲು ತುದಿಯಲ್ಲಿ ಎರಡು ರಂಧ್ರಗಳಿದ್ದು ಅವುಗಳ ಮುಖಾಂತರ ದಪ್ಪಾದ ದಾರದ ಹುರಿಯಿಂದ ಹಿಡಿದುಕೊಳ್ಳಲು ಅನುಕೂಲವಾಗುವಂತೆ ಕಟ್ಟಿರುತ್ತಾರೆ. ಹುರಿಯ ಮತ್ತೊಂದು ತುದಿಗೆ ೮ ಅಂಗುಲ ಉದ್ದದ ಮರದ ತುಂಡೊಂದನ್ನು ಕಟ್ಟಿರುತ್ತಾರೆ. ಕಟ್ಟಿಗೆಯ ತುಂಡಿನ ಸಹಾಯದಿಂದ ಹೊಡೆಯುವುದರಿಂದ ಜೋರಾದ ಶಬ್ದವು ಹೊರಹೊಮ್ಮುತ್ತದೆ. ಇಂದಿಗೂ ಈ ಸಮುದಾಯದವರು ಸಣ್ಣದಾದ ಹಗ್ಗದ ಸಹಾಯದಿಂದ ಇವುಗಳನ್ನು ಹೆಗಲಿಗೆ ಹಾಕಿಕೊಂಡು ಮನೆ ಮನೆಗೆ ತೆರುಳುವರು. ಹಾಗೆಯೇ ದೇವಸ್ಥಾನಗಳ ಪೂಜೆಯ ಸಮಯದಲ್ಲಿ ಬಳಸುವರು.

**ಗರುಢಗಂಭ:** ಈ ಸಮುದಾಯದವರು ಮನೆಯ ದೇವರ ಕೋಣೆಯಲ್ಲಿ ದೇವರಿಗೆ ಈ ಗರುಢಗಂಭದಲ್ಲಿಯೇ ದೀಪ ಹಚ್ಚುತ್ತಾರೆ. ಪ್ರತಿ ಶನಿವಾರ ಮತ್ತು ಹಬ್ಬ ಹರಿದಿನಗಳಲ್ಲಿ ಇದನ್ನು ಹಿಡಿದುಕೊಂಡು ಮನೆ ಮನೆಗೆ ತೆರಳುತ್ತಾರೆ. ಮನೆಯ ಮುಂದೆ ಹೋದಾಗ ದಾಸಯ್ಯ ಶಂಖ ಊದಿದಾಗ ಮನೆಯವರು ಮರದಲ್ಲಿ ಎಣ್ಣೆ, ಕಾಳು(ಬೇಳೆ) ಅಥವಾ ಅಕ್ಕಿ, ಊದುಬತ್ತಿ ತಂದು ನೀಡುವರು.ಎಣ್ಣೆಯನ್ನು ಗರುಢಗಂಭದಲ್ಲಿ ಹಾಕಿಕೊಂಡು ದೀಪ ಆರದಂತೆ ಶುಭ ಹಾರೈಸುತ್ತಾ ಹೋಗುವರು.

**ಚುಟುಕು(ಚಿಟಕಿ)ತಾಳ:** ಚಿಟಕಿ ತಾಳವು ಮರದ ತುಂಡು ಮತ್ತು ಲೋಹದ ಬಿಲ್ಲೆಗಳಿಂದ ತಯಾರಿಸಲ್ಪಟ್ಟಿರುತ್ತವೆ. ಅಕಾರದಲ್ಲಿ ಆಲದ ಮರದ ಎಲೆಯಂತಿರುವ ಆರು ಅಂಗುಲ ಉದ್ದದ ಈ ಚಿಟಕಿ ತಾಳೆ ಮರದ ಎರಡು ತುಂಡುಗಿರುತ್ತಾದೆ.ಈ ಚಪ್ಪಟೆ ತುಂಡುಗಳ ಮಧ್ಯದಲ್ಲಿ ರಂಧ್ರಗಳು ಹಾಕಲಾಗಿರುತ್ತವೆ. ಅಲ್ಲಲ್ಲಿ ಲೋಹದ ಬಿಲ್ಲೆಗಲು ಕೂಡಿಸಿರುತ್ತಾರೆ. ಹೆಬ್ಬೆರಳು ತೋರು ಬೆರಳುಗಳಿಗೆ ಹೊಂದಿಕೊಳ್ಳುವಂತೆ ಲೋಹದ ಎರಡು ಕೊಂಡಿ ಅಳವಡಿಸಿರುತ್ತಾರೆ. ಕೊಂಡಿಯಲ್ಲಿ ಹೆಬ್ಬೆರಳು ಮತ್ತು ತೋರು ಬೆರಳುಗಳು ಸೇರಿಸಿ ಚುಟಿಕಿ ತಾಳವನ್ನು ಹಿಡಿದು ಅದುಮಿದಾಗ ಒಂದು ವಿದವಾದ ನಾದ ಹೊರಹೊಮ್ಮುತ್ತದೆ. ಈ ತಾಳವನ್ನು ಈ ಸಮುದಾಯವರು ಭಜನೆ ಮತ್ತು ಬಯಲಾಟ ಪ್ರದರ್ಶನ ಏರ್ಪಡಿಸಿದಾಗ ಇದನ್ನು ಬಳಸುವರು.

**ಬಾಂಕಿ:** ಈ ಸಮುದಾಯದವರು ಬಾಂಕಿ ಎಂಬ ಉದ್ದನೆಯ ಶಹನಾಯಿ ತರ ಇರುವ ಇದು ವಿಶಿಷ್ಟವಾದುದಾಗಿದೆ. ಇದನ್ನು ಚೆನ್ನಾಗಿ ನುಡಿಸುವವರನ್ನು ಚೆನ್ನದಾಸರು ಎಂದು ಕರೆಯುತ್ತಾರೆ. ಅಪರೂಪವಾದ ಈ ಬಾಂಕಿಯು ದಾವಣಗೇರಿ ಜಿಲ್ಲೆಯ ಮಳಲಕೇರಿ ಗ್ರಾಮದಲ್ಲಿ ಕಾಣಬಹುದು.

ಒಟ್ಟಿನಲ್ಲಿ ಹಲವು ವಿಶೇಷತೆ ಹೊಂದಿರುವ ಈ ಸಮುದಾಯವು ಗಂಟೆ, ಜಾಗಟೆ, ಗೋಪಾಲಬುಟ್ಟಿ ಪರಿಕರಗಳೊಂದಿಗೆ ಮನೆಮನೆಗೆ ಹೋಗಿ ತತ್ವಪದಗಳನ್ನು ಹಾಡುತ್ತಾ ಸಮಾಜಕ್ಕೆ ಒಳ್ಳೆಯ ವಿಚಾರಧಾರೆಯನ್ನು ಜನರ ಮನಗಳಿಗೆ ತುಂಬುತ್ತಿದ್ದಾರೆ. ಇವರ ತತ್ವಪದಗಳು ಸಹ ತಾವು ವಾಸ ಮಾಡುತ್ತಿರುವ ಸುತ್ತ ಮುತ್ತಲು ಇರುವಂತ ಸಂತ-ಶರಣರು ರಚಿಸಿದ ಹಾಡುಗಳನ್ನು ಮನೋಜ್ಞವಾಗಿ ಹಾಡುತ್ತಾರೆ. ಬಳ್ಳಾರಿ, ಕೊಪ್ಪಳ ಜಿಲ್ಲೆಯಲ್ಲಿ ಕಂಡುಬರುವ ತತ್ವಪದಕಾರರರು ಕಡಕೋಳ ಮಡಿವಾಳಪ್ಪ ಮತ್ತು ಅವರ ತಾಯಿ ರಚಿಸಿದ ಹಾಡುಗಳನ್ನು ಹಾಡುತ್ತಾರೆ. ಈ ಸಮುದಾಯದ ಮನೋಜ್ಞವಾಗಿರುವ ಮೌಖಿಕ ಸಾಹಿತ್ಯವನ್ನು ಕನಾಟಕದ ಆಯ್ದ ಜಿಲ್ಲೆಗಳಲ್ಲಿ ಸಂಗ್ರಹಿಸಲಾಗಿದೆ.

**ಅಡಿಟಿಪ್ಪಣಿಗಳು**

೧. Dr.subhadra ರವರ Channa Encyclopaedia of Indian Tribes and cates Vol-14 (cosmo publication, New Delhi-2004) page No:4115
೨. Edgar thuston ರವರ castes and Tribes of southern India Vol-11 C.J (Asian Educational services-New Dehli-2001) page No: 112
೩. ಅದೇ ಪುಟ:೧೧೨
೪. Dr.subhadra ರವರ Channa Encyclopaedia of Indian Tribes and cates Vol-14 (cosmo publication, New Delhi-2004) Vol- 4 page No: 1458, (cosmo publication)-2004
೫. ಸಯ್ಯದ್ ಸಿರಾಜ್ ಉಲ್ ಹಸನ್ ರವರ ಪ್ರಕಾರ The castes and Tribes Of HEH Nizam's Dominions (Bombay: Government Central Press, 1920:rpt, 1989, New Delhi: Asian Education Services)
೬. ಕ್ಷೇತ್ರಕಾರ್ಯದ ಮಾಹಿತಿ
೭. ಭರಣಿ, ಸುಭಾಷ್: ಧರೆಗೆ ದೊಡ್ಡವರು, ಮೈಸೂರು ದ್ರಾವಿಡ ಪಬ್ಲಿಕೇಶನ್-೨೦೦೫:೩೨.
೮. ರಾಮಚಂದ್ರರಾವ್,ಸಾ.ಕೃ:ದಾಸ ಸಾಹಿತ್ಯ ಮತ್ತು ಸಂಸ್ಕೃತಿ, ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ: ೨೦೦೩-೦೬.
೯. ರಾಮಚಂದ್ರರಾವ್, ಸಾ. ಕೃ: ಮಾಲದಾಸರಿ ಕಥೆ: ೨೦೦೩, ಪುಟ- ೩೦೭
೧೦. ಜವರೇಗೌಡ ದೇ ಸಂ:೧೯೮೭: "ಜನಪ್ರಿಯ ಕನಕ ಸಂಪುಟ" ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಕರ್ನಾಟಕ ಸರ್ಕಾರ, ಬೆಂಗಳೂರು



## ಅಧ್ಯಾಯ : ಮೂರು

### ಚೆನ್ನದಾಸ ಸಮುದಾಯದ ಮೌಖಿಕ ಸಾಹಿತ್ಯದ ಪ್ರಕಾರಗಳು

# ಅಧ್ಯಾಯ: ಮೂರು

## ಚೆನ್ನದಾಸ ಸಮುದಾಯದ ಮೌಖಿಕ ಸಾಹಿತ್ಯ ಪ್ರಕಾರಗಳು

ಪ್ರಾಚೀನ ಕಾಲದಿಂದಲೂ ಭಾರತವು ಬಹುದೊಡ್ಡ ಸಂಸ್ಕೃತಿ ಹೊಂದಿರುವ ದೇಶವಾಗಿದೆ. ಇಲ್ಲಿ ಹಲವಾರು ಭಾಷೆ, ಆಚಾರ-ವಿಚಾರ, ಸಂಪ್ರದಾಯ ಆಚರಣೆಗಳನ್ನು ಹೊಂದಿದೆ. ಇಂತಹ ವಿಶಿಷ್ಟವಾದ ಸಂಸ್ಕೃತಿಯನ್ನು ಒಂದು ಸಿದ್ಧ ಚೌಕಟ್ಟಿನಲ್ಲಿ ಅಭ್ಯಸಿಸಲು ಸಾರ್ವತ್ರಿಕವಾಗಿ ಒಪ್ಪಿತವಾಗುವ ಒಂದು ಹೊಸ ಮಾದರಿಯನ್ನು ರೂಪಿಸಿಕೊಳ್ಳುವುದು ಅವಶ್ಯಕವಾಗುತ್ತದೆ. ಮೊದಲು ಜಾನಪದ ಎಂದರೇನು ಎಂಬುದನ್ನು ನೋಡುವುದಾದರೆ, ಜಾನಪದವು ವಿಶಾಲ ಅರ್ಥವನ್ನು ಹೊಂದಿದ್ದು, ಜನಪದ, ಜಾನಪದ ಎಂಬ ಪದಗಳ ಮೂಲಕ ಹೆಚ್ಚು ಬಳಕೆಯಲ್ಲಿದೆ. Folk literature ಎಂಬುದಕ್ಕೆ ಪರ್ಯಾಯ ಪದವಾಗಿ, ಜನಪದ ಎಂದರೆ ಆಪ್ಟೆಯವರ ಅರ್ಥಕೋಶದ ಪ್ರಕಾರ A community, race, nation, a kingdom, an empire, an inhabited country ಮೊದಲಾದ ಅರ್ಥಗಳ ಜೊತೆಗೆ the country opp, the town, (ಪುರ, ನಗರ). ಜಾನಪದ ಎಂದರೆ an inhabitant of the country, a rustic, boor, peasant (opp, ಪೌರ) a country ಎಂಬ ಅರ್ಥ ಕೊಡುತ್ತದೆ. ಒಟ್ಟಿನಲ್ಲಿ Folk ಒಂದು ಜನಾಂಗ, ಸಮಾಜದ ಕೆಳಗಿನ ಸ್ತರ, ಸಂಕೀರ್ಣ ಸ್ವಭಾವದ ನಾಗರಿಕ ಸಮಾಜದಲ್ಲಿ ಹಳೆಯ ಗುಂಪು ಮೂಲ ಸಂಸ್ಕೃತಿಯನ್ನು ಒಯ್ಯುವ ಸಾಮಾಜಿಕ ವರ್ಗ, ಸಂಪ್ರದಾಯದೊಂದಿಗೆ ಹೆಣೆದ ಸಮಾಜ ಈ ಮೊದಲಾದ ಅರ್ಥಗಳನ್ನು ಕೊಡುತ್ತದೆ. ಇದೆಲ್ಲದರಿಂದ ತಿಳಿಯುವುದೇನೆಂದರೆ ಇಂಗ್ಲೀಷಿನ Folk ಹಳೆಯ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿರುವ ಸಾಮಾನ್ಯರ ಸಮೂಹವಾಗಿದೆ. ಪ್ರಾಚೀನ ಕಾಲದಿಂದಲೂ ಮನುಷ್ಯನ ಬದುಕಿನಲ್ಲಿ ಆಗಿ ಹೋದ ಬದುಕಿನ ನೋವು- ನಲಿವುಗಳನ್ನು ಕಟ್ಟಿಕೊಡುವ ಮಾರ್ಗವಾಗಿದೆ. ಜಾನಪದದ ಬಗ್ಗೆ ರಿಚರ್ಡ್ ಎಂ. ಡಾರ್ಸನ್ ರವರು ನಾಲ್ಕು ಪ್ರಮುಖ ವಿಸ್ತಾರ ಕ್ಷೇತ್ರಗಳಡಿಯಲ್ಲಿ ಜಾನಪದ ಅಧ್ಯಯನ ಸಾಗಬೇಕೆಂದು ತಿಳಿಸುತ್ತಾರೆ. ಅದರಲ್ಲಿ ಮೊದಲನೆಯದು ಮೌಖಿಕ ಸಾಹಿತ್ಯ, ಎರಡನೆಯದು ಭೌತಿಕ ಸಾಹಿತ್ಯ ಮೂರನೆಯದು ಸಾಮಾಜಿಕ ಜನಪದ ಸಂಪ್ರದಾಯಗಳು ಮತ್ತು ಪ್ರದರ್ಶನಾತ್ಮಕ ಜನಪದ ಕಲೆಗಳು.[೧] ಇದರಲ್ಲಿ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಮೌಖಿಕ ಸಾಹಿತ್ಯದಲ್ಲಿ ಚೆನ್ನದಾಸರ ಕಲೆ, ಸಂಪ್ರದಾಯ ಆಚಾರ-ವಿಚಾರಗಳ ಬಗ್ಗೆ ನೋಡುವುದಕ್ಕಿಂತ ಮುಂಚೆ ಮೌಖಿಕ

ಸಾಹಿತ್ಯ ಅರ್ಥ ನೋಡುವುದಾದರೆ, ಮೌಖಿಕ ಸಾಹಿತ್ಯ ಎಂದರೆ ಮಾತಿನ ರೂಪ, ಹಾಡುವಂಥ ಹಾಗೂ ಶ್ರುತಿ ರೂಪದ ರಚನೆಗಳನ್ನು ಮೌಖಿಕ ಸಾಹಿತ್ಯವೆಂದು ಗುರುತಿಸಲಾಗುತ್ತದೆ. ಇದನ್ನು ಸಾಂಪ್ರದಾಯಿಕವಾಗಿ "ಜನಪದ ಸಾಹಿತ್ಯ" ಗದ್ಯಕಥನ ಒಂದು ಮಹತ್ವದ ಉಪವಿಭಾಗ. ಇದು ಪುರಾಣ, ಕಟ್ಟುಕಥೆ, ಐತಿಹ್ಯ, ಅಡ್ಡಕತೆ, ಹಾಸ್ಯ ತುಣುಕುಗಳು ಇತ್ಯಾದಿಗಳನ್ನು ಒಳಗೊಳ್ಳುತ್ತದೆ. ಮತ್ತೊಂದು ಉಪವಿಭಾಗವೆಂದರೆ ಮೌಖಿಕ ಕಾವ್ಯ. ಇದು ಕೂಡ ತನ್ನದೇ ಪರಿವಾರವನ್ನು ಹೊಂದಿದ್ದು, ಜನಪದ ಗೀತೆಗಳು, ಕಥನ ಗೀತಗಳು, ಲಾವಣೆಗಳು, ಮಹಾಕಾವ್ಯಗಳು, ಅದರಲ್ಲೂ ಹಬ್ಬ, ಹರಿದಿನ, ಜಾತ್ರೆ, ಉತ್ಸವ, ವ್ರತ, ಸಮಾರಾಧನೆಗಳನ್ನು ಕುರಿತ ಮೌಖಿಕ ಕಾವ್ಯ ಗಮನಾರ್ಹವಾದುದಾಗಿದೆ. ಇಂತಹ ಮೌಖಿಕ ಸಾಹಿತ್ಯವನ್ನು ಎಲ್ಲಾ ಅಲೆಮಾರಿ ಸಮುದಾಯಗಳಲ್ಲಿ ಕಾಣಬಹುದಾಗಿದ್ದು, ಮುಖ್ಯವಾಗಿ ಚೆನ್ನದಾಸ ಸಮುದಾಯದಲ್ಲಿನ ಮೌಖಿಕ ಸಾಹಿತ್ಯವು ವಿಶೇಷ ಮತ್ತು ವಿಶಿಷ್ಟತೆಯನ್ನು ಹೊಂದಿದೆ. ಹಾಗಾಗಿ ಚೆನ್ನದಾಸರ ಮೌಖಿಕ ಸಾಹಿತ್ಯವನ್ನು ತತ್ವಪದಗಳು, ಲಾವಣೆಗಳು, ಗಾದೆಗಳು, ಕಥನ ಕಾವ್ಯಗಳು ಮತ್ತು ರಂಗಭೂಮಿ ಸಾಹಿತ್ಯಗಳೆಂದು ವಿಭಾಗಗಳನ್ನಾಗಿ ಮಾಡಿಕೊಂಡು ಒಂದೊಂದು ಪ್ರಕಾರಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

### ೩.೧ ಚೆನ್ನದಾಸರ ತತ್ವಪದಗಳು

ಭಾರತೀಯ ಸಾಹಿತ್ಯದಲ್ಲೆಲ್ಲಾ ಭಕ್ತಿಯ ಹಾಡುಗಳು ಅಥವಾ ತತ್ವಪದಗಳು ಪ್ರಚಲಿತದಲ್ಲಿವೆ. ಹಿಂದಿ ಸಾಹಿತ್ಯದಲ್ಲಿ ಮೀರಾಬಾಯಿ, ತುಳಸಿದಾಸ, ಸೂರದಾಸ, ಕಬೀರದಾಸ, ಮಲಿಕ್ ಮಹ್ಮದ್ ತಾಯರಿ, ಕಾಶ್ಮೀರಿ ಸಾಹಿತ್ಯದಲ್ಲಿ ಲಲ್ಲೇಶ್ವರಿ, ಮರಾಠಿ ಸಾಹಿತ್ಯದಲ್ಲಿ ಜ್ಞಾನೇಶ್ವರ ತುಕರಾಮ, ಉರ್ದುವಿನಲ್ಲಿ ಬಂದಾವಾಜ ಮುಂತಾದವರು ಪ್ರಮುಖರಾಗಿದ್ದಾರೆ. ಅಲ್ಲದೆ ತೆಲುಗು, ತಮಿಳು ಮುಂತಾದ ಸಾಹಿತ್ಯದಲ್ಲಿಯೂ ಕವಿ ಸಂತರು ಕೃಷಿಗೈದು ಭಕ್ತಿಯ ಹಾಡುಗಳನ್ನು ಉತ್ತುಂಗ ಶಿಖರಕ್ಕೇರಿಸಿದ್ದನ್ನು ಕಾಣುತ್ತೇವೆ. ಹೀಗೆ ಕನ್ನಡ ಸಾಹಿತ್ಯದಲ್ಲಿಯೂ ಇಂತಹ ತತ್ವಪದ ಸಾಹಿತ್ಯ ಸೃಷ್ಟಿಯಾಗಿದ್ದು ಅದರಲ್ಲಿ ಒಂದು ಶಿಷ್ಟ ಕವಿಗಳ ಭಕ್ತಿ ಸಾಹಿತ್ಯ, ಇನ್ನೊಂದು ಜನಪದ ಕವಿಗಳ ಭಕ್ತಿಪಂಥ ನಿಜಗುಣ ಶಿವಯೋಗಿ, ಬಾಲಲೀಲಾ, ಮಹಾಂತ ಶಿವಯೋಗಿ, ಘನಮಠ ಶಿವಯೋಗಿ ಜೊತೆಗೆ ವೈಷ್ಣವ ತತ್ವಗಳನ್ನು ಪ್ರತಿಪಾದಿಸಿ ಕೀರ್ತಿಶೇಷರಾದ ಪುರಂದರದಾಸ, ಕನಕದಾಸ, ವಿಠ್ಠಲದಾಸ, ಜಗನ್ನಾಥ ದಾಸರು ಕವಿಗಳಲ್ಲಿ ಪ್ರಮುಖರಾಗಿದ್ದಾರೆ. ಹೀಗೆ ಹಲವಾರು ಕವಿಗಳು ತತ್ವಪದ ಸಾಹಿತ್ಯವನ್ನು ಬೆಳೆಸಿ ಪ್ರೋತ್ಸಾಹಿಸಿದರು.

#### ೩.೧.೧ ತತ್ವಪದದ ಅರ್ಥ-ಸ್ವರೂಪ-ಲಕ್ಷಣಗಳು

ತತ್ವ ಎಂದರೆ ಸಿದ್ಧಾಂತ, ಪರಮಾತ್ಮ, ನಿಜಸ್ಥಿತಿ ಎಂದರ್ಥವಾಗುತ್ತದೆ. ಇಲ್ಲಿ ಪದ ಎಂಬುದನ್ನು ಹಾಡು, ಹದಗೊಂಡ ಶಬ್ಧ ಎಂತಲೂ ಕರೆಯುತ್ತೇವೆ. ಸರಳವಾಗಿ ಹೇಳುವುದಾದರೆ ಪದ ಎಂದರೆ ಲಯಬದ್ದವಾಗಿ, ರಾಗಬದ್ದವಾಗಿ ಜನ ಸಾಮಾನ್ಯರನ್ನು ಆಕರ್ಷಿಸುವ ರೀತಿಯಲ್ಲಿ ಹಾಡುಬಹುದಾದ ಸಾಹಿತ್ಯ ಎನ್ನಬಹುದು. ತತ್ವ ಕಾರ್ಯಕರಣ ಸಂಬಂಧದ ಹಿನ್ನೆಲೆಯಲ್ಲಿ ವಿವರಣೆ ನೀಡುವುದರ

ಮೂಲಕ ಅಭಿವ್ಯಕ್ತಿಸುವ ಕ್ರಿಯೆಯೇ ತತ್ವಪದ. ತತ್ವಪದದಲ್ಲಿ ತತ್ವ ವಸ್ತುವಾದರೆ, ಪದ ಅಭಿವ್ಯಕ್ತಿ ಮಾಧ್ಯಮ, ವಸ್ತು ಮತ್ತು ಅಭಿವ್ಯಕ್ತಿ ಎರಡನ್ನು ಸಮನ್ವಯಗೊಳಿಸಿಕೊಂಡಿರುವ 'ತತ್ವಪದ' ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿರುವುದರ ಜೊತೆಗೆ ಸಂಸ್ಕೃತಿಯೊಂದರ ಪ್ರತೀಕವೂ ಆಗಿದೆ. ಹಾಗಾಗಿ ವ್ಯಕ್ತಿಯ ಅನುಭವವೇ ಇದಕ್ಕೆ ಆಧಾರವಾಗಿರುತ್ತದೆ ಎನ್ನುವುದು ಒಂದು ಅರ್ಥವಾದರೆ, ಇನ್ನೊಂದು ಅರ್ಥದಲ್ಲಿ ತತ್ವ ಎಂದರೆ ನಿಯಮ, ಸಿದ್ಧಾಂತ ಅಧ್ಯಾತ್ಮ ಕುರಿತಾದ ಚಿಂತನ ಎಂದರ್ಥ. ಆತ್ಮ-ಪರಮಾತ್ಮ, ಜೀವ-ಶಿವರನ್ನು ಒಂದಾಗಿಸುವ ತತ್ವ ಈ ಕುರಿತು ಚಿಂತನ ಮಾಡುವ ಹಾಡುವ ಹಾಡುಗಳಿಗೆ ತತ್ವಪದ ಹಾಡುಗಳೆಂದು ಕರೆಯುವರು. ತತ್ವಪದಗಳು ಹರ ಸಂಸ್ಕೃತಿಯನ್ನು ಹೇಳಿದರೆ, ಕೀರ್ತನೆಗಳು ಹರಿ ಸಂಸ್ಕೃತಿಯನ್ನು ಹೇಳುತ್ತವೆ.[೨] ಶರಣರದಾಸರ ವಚನ-ಕೀರ್ತನೆಗಳಂತೆ ಜನಸಾಮಾನ್ಯರ ತಿಳುವಳಿಕೆಗಾಗಿ ಅವರ ಭಾಷೆಯಲ್ಲಿ ರಚನೆಯಾದ ಸಾಹಿತ್ಯ ಪ್ರಕಾರ ಇವುಗಳಾಗಿವೆ.

ತತ್ವಪದ ಸಾಹಿತ್ಯವು ಜನಪದ ಸಾಹಿತ್ಯದ ಬಹುದೊಡ್ಡ ನಿಧಿಗಳಾಗಿವೆ. ಜನಪದದ ಅನುಭಾವದ ಐಸಿರಿ, ಪರಮಾನುಭವ ಬೋಧೆ, ಧಾರ್ಮಿಕ ಶ್ರೀಮಂತಿಕೆಯೆಲ್ಲಾ ಬೆಳೆದಿದ್ದು ಈ ಭಕ್ತಿಯ ಹಾಡುಗಳ ಮಾಧ್ಯಮದಿಂದಲೇ. ಇವು ಭಕ್ತಿಯ ಹೊನಲಾಗಿವೆ ಮತ್ತು ಅನುಭವದ ಕೆನೆಯಾಗಿದೆ. ಅಂತೆಯೇ ಇವುಗಳಿಗೆ ಭಕ್ತಿಗೀತೆ, ತತ್ವಪದ ಅನುಭಾವ ಪದ, ಕೈವಲ್ಯ ಪದ, ಭಜನೆಯ ಹಾಡು ಎಂದೆಲ್ಲ ಕರೆಯುವರು. ಸವಿಶಿಷ್ಟವಾದ ದಾಟಿಯಲ್ಲಿ ಸ್ವರ ಹಿಡಿದು ಹಾಡುವುದರಿಂದಾಗಿ ಇವುಗಳಿಗೆ ಸ್ವರವಚನಗಳೆಂದೂ ಕರೆಯುವರು. ಹಾಗೂ ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಇವುಗಳಿಗೆ ಭಜನೆ ಹಾಡುಗಳೆಂದು ಹೆಚ್ಚು ಕರೆಯುವ ವಾಡಿಕೆ ಇದೆ.

ಅನುಭಾವ ಪದಗಳು ಹಾಡುಗಬ್ಬದ ಒಂದು ವಿಶಿಷ್ಟ ರೂಪ. ಒಂದರ್ಥದಲ್ಲಿ ಜನಪದ ಭಾವಗೀತೆಗಳೆಂದೇ ಕರೆಯಬಹುದಾಗಿದೆ. ಇವು ವ್ಯಕ್ತಿಗತವಾಗಿಯೂ ಮತ್ತು ಸಾಮೂಹಿಕವಾಗಿಯೂ ಹಾಡಲ್ಪಡುತ್ತವೆ. ದೇವರ ಎದುರಿಗೆ ಏಕಾಂತದಲ್ಲಿ ಏಕತಾರಿಯ ವಾದ್ಯದೊಡನೆ ಧ್ಯಾನಿಸುವುದು ಒಂದು ವಿಧ. ಇದು ಸಾಮೂಹಿಕ ಭಜನೆ. ಇದು ಪ್ರಾಚೀನ ಪೂರ್ವದಲ್ಲಿನ ಪದ್ಧತಿಯಾಗಿದ್ದು, ಗುಡಿ-ಗುಂಡಾರ ಮುಂತಾದ ಧಾರ್ಮಿಕ ಸ್ಥಳಗಳಲ್ಲಿ ಬೆಳೆದು ಬಂದ ಹಾಡುಗಳು ನಂತರ ಭಿಕ್ಷುಕರೊಡನೆ ಬೀದಿಗಿಳಿದವು. ಇದರಿಂದ ಅವರ ವೇಷದಲ್ಲಿ ಶಿವತತ್ವ, ಶಿವಧರ್ಮಗಳು ಮಹಾಜನರ ಮನೆ ಬಾಗಿಲಿಗೆ ತಲುಪುವಂತಾಯಿತು. ಇವುಗಳು ಮುಂದುವರಿದ ರೂಪವೇ ಈಗ ಎಲ್ಲೆಡೆ ಕಾಣುವ ಸಾಮೂಹಿಕ ಭಜನೆಯಾಗಿದೆ. ಒಬ್ಬನೇ ವ್ಯಕ್ತಿಗೆ ಪಲ್ಲವಿ, ನುಡಿಗಳನ್ನು ಹೇಳುವುದರಿಂದಾಗಿ ಹಾಡುವವನಿಗೆ ದಣಿವು ಮೂಡುತ್ತದೆ. ಹಾಗಾಗಿ ವ್ಯಕ್ತಿಗತವಾಗಿ ಹೇಳುವ ಬದಲು ಸಾಮೂಹಿಕದತ್ತ ತಿರುಗಿದಂತಿವೆ. ಸಾಮೂಹಿಕ ಭಜನೆಯಲ್ಲಿ ಮುಮ್ಮೇಳ-ಹಿಮ್ಮೇಳಗಳೆಂದು ಎರಡು ಪಂಗಡಗಳಿರುತ್ತವೆ. ಹಾಡಿಗೆ ಹಿನ್ನೆಲೆ ವಾದ್ಯವಾಗಿ ದಮಡಿ ತಾಳೆ, ಮೃದಂಗ, ತಬಲ, ಹಾರ್ಮೋನಿಯಂ, ಝೂಂಗಟಿ ಗೆಜ್ಜೆಗಳಿರುತ್ತವೆ. ದಮಡಿ, ತಾಳ ಏಕತಾರಿಗಳನ್ನು ಮುಂಬೈ-ಕರ್ನಾಟಕದಲ್ಲಿ ಬಳಸಿದರೆ ದಮಡಿಗೆ ಬದಲಾಗಿ ಡೋಲಕ ಬಾರಿಸುವ ಪದ್ದತಿ ಮುಸಲ್ಮಾನರ ಪ್ರಭಾವದಿಂದಾಗಿ ಹೈದ್ರಾಬಾದ್ ಕರ್ನಾಟಕದಲ್ಲಿ

ಪ್ರಚಲಿತವಿದೆ. ಸಮೂಹ ಭಜನೆಯಲ್ಲಿ ಏಕತಾರಿ ಇದ್ದು ಅದರ ಪಾತ್ರ ಗೌಣವಾಗಿರುತ್ತದೆ. ವಾಧ್ಯಗಳ ನಾದದಲ್ಲಿ ಇದರ ಮಾಧುರ್ಯ ಅಷ್ಟಾಗಿ ಕೇಳಿ ಬರುವುದಿಲ್ಲ. ಹಾಡಿನ ಮುಖಾಂತರ ದೇವರ ಸೇವೆ ಸಲ್ಲಿಸುವ ಪರಿಪಾಠ ಇಲ್ಲಿನದು. ದೇವರಿಗೆ ಪ್ರಾರ್ಥನೆ ಸಲ್ಲಿಸಿ ಅನಿಷ್ಟಗಳನ್ನು ದೂರ ಮಾಡಿಕೊಳ್ಳುವುದು ಇಲ್ಲಿನ ಗುರಿಯಾಗಿದೆ. ಮುಂದಿನವರು ಹಾಡಿದ ನುಡಿಗಳನ್ನು ಸ್ವರವೆತ್ತಿ ಹಿಂದಿನವರು ಜೋರಾಗಿ ಹೇಳುವರು. ಪಲ್ಲ, ಅನುಪಲ್ಲ, ನುಡಿಗಳಾಗಿ ಹಾಡುತ್ತ ಕೊನೆಗೆ ಉಡುತಿಗೆ ಬಿದ್ದು ಹಾಡು ಅಂತ್ಯವಾಗುತ್ತದೆ.'ಉಡತಿಯ ಹಾಡಿಗೆ ದೇವ ದೇವತೆಗಳ ಹೆಸರು-ನಾಮಾಂಕಿತ ಬಿರುದುಗಳು ಕಂಡುಬರುತ್ತವೆ. ಪ್ರತಿ ಪದ್ಯದ ಕೊನೆಯಲ್ಲಿ ಕವಿಯ ಅಂಕಿತ, ಇಷ್ಟ ದೇವರ ಹೆಸರು ಸೇರಿಸಿ ಹೇಳುತ್ತಾರೆ. ಇನ್ನು ಕೆಲವಡೆ ಯಾವ ಹೆಸರನ್ನು ಹೇಳದೆ ನಿರಾಡಂಬರತೆಗೆ ಸಾಕ್ಷಿಯಾಗಿವೆ.

ಚೆನ್ನದಾಸ ಸಮುದಾಯದಲ್ಲಿನ ಬಹುಸಂಖ್ಯಾತ ತತ್ವಪದಗಳಲ್ಲಿ ಭಕ್ತಿ-ಜ್ಞಾನ-ವೈರಾಗ್ಯ, ಮುಕ್ತಿಯ ಹಂಬಲ, ಆತ್ಮ ಪರಮಾತ್ಮ, ಯೋಗ-ತ್ಯಾಗ, ಜೀವ-ಶಿವ ಮುಂತಾದ ಅಧ್ಯಾತಿಕ ವಿಚಾರಗಳು ಇವುಗಳ ಅಂತರಾಳದಲ್ಲಿ ಒಳಗೊಂಡಿವೆ. ಅಲ್ಲದೆ ಜನರ ಅಜ್ಞಾನ, ಅಂಧಕಾರ, ಮೂಡನಂಬಿಕೆ, ಮಡಿ-ಮೈಲಿಗೆ, ಜಾತಿ-ಮತ, ವರ್ಗ-ವರ್ಣ ಭೇದ ಮುಂತಾದವುಗಳ ಕುರಿತು ವಿಡಂಬನೆಗಳಿವೆ. ಜೀವಾತ್ಮ-ಪರಮಾತ್ಮನಾಗುವುದು, ಮಾನವ-ಮಹಾಮಾನವನಾಗುವುದು ಅರಿಷಡ್ವರ್ಗಗಳ ಜಯಿಸುವ ಕುರಿತು ಜೀವನ ಕ್ಷಣಿಕವಾದುದು ಇದಕ್ಕೆ ಮರಣವಿದೆ ಎಂದು ಎಚ್ಚರವಹಿಸುವಂತೆ ತತ್ವಪದಗಳು ಹೇಳಿವೆ. ತಾತ್ವಿಕತೆಯ ಜೊತೆಗೆ ಸಾಮಾಜಿಕ ವಿಡಂಬನೆಯೂ ಇಲ್ಲಿ ಇದ್ದು, ದಿನನಿತ್ಯದ ಕಣ್ಣಿಗೆ ಕಾಣುವ ವಸ್ತುಗಳನ್ನು ತಮ್ಮ ಹಾಡುಗಳಿಗೆ ಬಳಸಿಕೊಂಡು ತಾತ್ವಿಕತೆಯನ್ನು ಮೆರೆದಿದ್ದಾರೆ.

### ೩.೧.೨ ಕನ್ನಡ ಸಾಹಿತ್ಯದಲ್ಲಿ ತತ್ವಪದದ ಪರಂಪರೆ

ಮೂಲತಃ ತತ್ವಪದಗಳು ವಚನ ಸಾಹಿತ್ಯದ ನಂತರದ ಬೆಳವಣಿಗೆಗಳಾಗಿವೆ. ಸದ್ಯ ತಿಳಿಯುವ ಆದ್ಯ ತತ್ವಪದಕಾರನೆಂದರೆ, ಸಕಲೇಶ ಮಾದರಸ ನಂತರ ಬಸವಣ್ಣ, ಪ್ರಭುದೇವ ಮುಂತಾದವರು ತತ್ವಪದ ಸಾಹಿತ್ಯವನ್ನು ಬೆಳಕಿಗೆ ತಂದವರು. ಇದು ಹೆಚ್ಚು ಪ್ರಚಾರಕ್ಕೊಳಪಡಿಸಿದವರೆಂದರೆ ೧೬ ನೆಯ ಶತಮಾನದ ಶ್ರೀ ನಿಜಗುಣ ಶಿವಯೋಗಿಗಳು. ಇವರು ಗಹನವಾದ ಕಠಿಣವಾದ ತತ್ವಗಳನ್ನು ಇವರು ಸರಳೀಕೃತಗೊಳಿಸಿ ಜನಸಾಮಾನ್ಯರಿಗೂ ತಿಳಿಯುವಂತೆ ಬೋಧಿಸಿದರು. ಇವರ ಪರಿಣಾಮವಾಗಿ ತತ್ವಪದ ಸಾಹಿತ್ಯ ಕ್ಷೇತ್ರ ಹೆಚ್ಚು ಜನಪ್ರಿಯತೆಯನ್ನು ಗಳಿಸಿತು. ಇವರ ನಂತರ ಸರ್ಪಭೂಷಣ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು ಮುಂದುವರೆಸಿದರು.

ನಿಜಗುಣ ಶಿವಯೋಗಿಗಳು ತಮ್ಮ ತತ್ವಪದ ಸಾಹಿತ್ಯ ಸಂಕಲನಕ್ಕೆ 'ಕೈವಲ್ಯ ಪದ್ಧತಿ' ಎಂದು ಕರೆದರೆ ಸರ್ಪಭೂಷಣ ಶಿವಯೋಗಿಗಳು ತಮ್ಮ ಹಾಡುಗಳ ಸಂಕಲನಕ್ಕೆ 'ಕೈವಲ್ಯ ಕಲ್ಪವಲ್ಲರಿ' ಎಂದು ಕರೆಯುತ್ತಾರೆ. ಹಾಗೆಯೇ ಬಾಲಲೀಲಾ ಮಹಾಂತ ಶಿವಯೋಗಿಗಳು 'ಕೈವಲ್ಯ ದರ್ಪಣ' ಎಂದು ಕರೆದಿದ್ದಾರೆ. ಹೀಗೆ ಪ್ರಾರಂಭದಿಂದ ಪ್ರಸ್ತುತವರೆಗೆ ತತ್ವಪದ ಸಾಹಿತ್ಯ ಕನ್ನಡದಲ್ಲಿ ಹುಲುಸಾಗಿ

ಬೆಳೆದುಕೊಂಡು ಬಂದಿರುವುದರಿಂದ, ೧೮-೧೯ ನೇಯ ಶತಮಾನವನ್ನು ತತ್ವಪದ ಯುಗವೆಂದು ಕರೆದಿದ್ದು, ತತ್ವಪದ ಸಾಹಿತ್ಯಕ್ಕೆ ಒಂದು ಪರಂಪರೆಯನ್ನು ಕಟ್ಟಿಕೊಂಡು ಡಾ.ಹೆಚ್. ತಿಪ್ಪೇರುದ್ರಸ್ವಾಮಿಯವರು "ಕನ್ನಡದಲ್ಲಿ ಕೈವಲ್ಯ ಸಾಹಿತ್ಯ" ಎಂಬ ಗ್ರಂಥವನ್ನೇ ರಚಿಸಿದ್ದಾರೆ.[೧೩]

ತತ್ವಪದಗಳು ಒಂದು ಅನುಭವ ಘಟನೆಯಿಂದ ಹುಟ್ಟುತ್ತವೆ. ಈ ಘಟನೆಗಳ ತತ್ವವನ್ನು ಭೇದಿಸಿರುವುದರ ಮೂಲಕ ಆ ಅನುಭವವನ್ನು ಅನುಭಾವಕ್ಕೆ ತಿರುಗಿಸುತ್ತವೆ. ಸಂತರ ಅಥವಾ ಅವರ ಶಿಷ್ಯರ ಬದುಕಿನ ಘಟನೆಗಳೇ ತತ್ವಪಪದಗಳಿಗೆ ವಿವರಣೆಯಾಗಿದೆ. ಕೆಲವು ಸಲ ವಿಲಕ್ಷಣ ಮುಖಾಂತರ ಸಂತರ ಲೋಕದವರ ಮನಸ್ಸಿನಲ್ಲಿ ಹೊಸ ಅರ್ಥಗಳನ್ನು ಹೊರಡಿಸುತ್ತಾರೆ. ಇದನ್ನು ಸಂತ ಪರಂಪರೆಯಲ್ಲಿ ಕ್ರಿಯಾರೂಪಗಳು ತತ್ವಪದಗಳು ಕಾರಣೀಕಗಳ ವಾಗ್ರೂಪಗಳು ಎನ್ನುವ ಪ್ರೊ.ಎಚ್.ಎಸ್. ಶಿವಪ್ರಕಾಶ ಅವರು ತತ್ವಪದಗಳಿಗೂ ಕಾರಣೀಕಗಳಿಗೂ ಇರುವ ಅರ್ಥಪೂರ್ಣ ಸಂಬಂಧವನ್ನು ವಿವರಿಸಿದ್ದಾರೆ.

ತತ್ವಪದ ಸಾಹಿತ್ಯ ಅಧ್ಯಾತ್ಮಕ್ಕೆ ಸಂಬಂದಿಸಿರುವುದರಿಂದ ಈ ಸಾಹಿತ್ಯ ಪ್ರಕಾರ ಧರ್ಮದ ಚೌಕಟ್ಟಿನಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದಾಗಿದೆ. ತತ್ವಪದಗಳನ್ನು ಜನಪದ ಹಾಡುಗಳೆಂದು ಕೆಲವು ವಿದ್ವಾಂಸರು ಗುರುತಿಸಿದರೆ ಅವುಗಳನ್ನು ಶಿಷ್ಟ ಸಾಹಿತ್ಯ ಪದದೊಂದಿಗೆ ಸಮೀಕರಿಸಲಾಗುತ್ತದೆ. ಬೇರೆ ಬೇರೆ ಮಾರ್ಗಗಳ ಮೂಲಕ ಒಂದೇ ಸತ್ಯವನ್ನು ಕಂಡುಕೊಳ್ಳುವ ಕ್ರಿಯೆಗೆ ತತ್ವಪದ ಎಂದು ಕರೆಯಲಾಗುತ್ತದೆ. ಈ ಪದವು ಅನುಭಾವ ಪದಕ್ಕೆ ಸಮಾನವಾಗಲಾರದೆಂದು ಒಪ್ಪಿಕೊಂಡಿದ್ದಾರೆ.[೧೪] ಆದರೆ ಅನುಭಾವವೆಂಬುದು ಕೇವಲ ತತ್ವಪದ ಸಾಹಿತ್ಯ ಪ್ರಕಾರದಲ್ಲಿ ಇರದೆ ವಚನ, ಕೀರ್ತನೆಯಂತಹ ಇತರ ಪ್ರಕಾರಗಳಲ್ಲಿಯೂ ಹುದುಗಿಕೊಂಡಿದೆ.

ತತ್ವಪದಗಳನ್ನು ರಚಿಸುವವರಿಗೆ ಅನುಭಾವಿ ಕವಿಗಳೆಂದು ಕರೆದರೆ, ತತ್ವಪದಗಳನ್ನು ಪ್ರಸಾರ ಮಾಡುವವರಿಗೆ ಭಜನೆ ಮೇಳಗಳೆಂದು ಗುರುತಿಸಲಾಗಿದೆ. ಅಂದರೆ ತತ್ವಪದ ಸಾಹಿತ್ಯ ಪ್ರಕಾರ ಪೂರ್ಣಗೊಳ್ಳಬೇಕಾದರೆ ಅದರ ರಚನೆಕಾರನಷ್ಟೇ ಅದನ್ನು ಪ್ರಸಾರ ಮಾಡುವ ಹಾಡುಗಾರನ ಪ್ರಾಮುಖ್ಯತೆಯೂ ಎದ್ದು ಕಾಣುತ್ತದೆ. ಕನ್ನಡ ತತ್ವಪದ ಸಾಹಿತ್ಯ ಪರಂಪರೆಯಲ್ಲಿ ತತ್ವಪದ ರಚನೆಕಾರನೇ ಅದರ ಹಾಡುಗಾರರಾಗಿರುವುದು ವಿಶಿಷ್ಟವಾಗಿದೆ.

ವಚನಕಾರರನ್ನು, ಕೀರ್ತನಕಾರರನ್ನು ಅನುಭಾವಿ ಕವಿಗಳೆಂದು ಕರೆದಿಲ್ಲ. ಆದರೆ ವಚನ, ಕೀರ್ತನೆಗಳಲ್ಲಿ ಅನುಭಾವ ತುಂಬಿದೆ. ತತ್ವಪದ ರಚನಾಕಾರರನ್ನು ಮಾತ್ರ ಅನುಭಾವಿ ಕವಿಗಳೆಂದು ಕರೆಯಲಾಗಿದೆ. ಆದ್ದರಿಂದ ತತ್ವಪದಕ್ಕೂ ಅನುಭಾವಕ್ಕೂ ಅವಿನಾಭಾವ ಸಂಬಂಧವಿದೆ. ಅನುಭಾವವನ್ನು ಹೊರತುಪಡಿಸಿದ ತತ್ವಪದಗಳು ತುಂಬಾ ವಿರಳವೆನ್ನಬಹುದು. ಇಲ್ಲಿ ಬರುವ ತತ್ವ ಅನುಭಾವದ ಮೂಲಕ ಹುಟ್ಟಿಕೊಂಡು ಅನುಭಾವದ ಮುಖಾಂತರ ಹೊರಹೊಮ್ಮುತ್ತದೆ.[೧೫]

ತತ್ವಪದ ಸಾಹಿತ್ಯ ಪ್ರಕಾರವನ್ನು ಕೀರ್ತನೆ ಎಂಬ ಹೆಸರಿನಲ್ಲಿ ರಚಿಸಿ ಜನಮನಕ್ಕೆ ಮುಟ್ಟಿಸಿದ ಕೀರ್ತಿ ಆದ್ಯ ಸ್ವರ ವಚನಕಾರನಾದ ಸಕಲೇಶ ಮಾದರಸನಿಗೆ ಸಲ್ಲುತ್ತದೆ. ನಂತರ ಪುರಂದರದಾಸಾದಿ

ಕೀರ್ತನೆಕಾರರಿಗೆ ಸಲ್ಲುತ್ತದೆ. ಶಿವಪರವಾದ ಸ್ತುತಿ ಶರಣರಾದರೆ, ವಿಷ್ಣು ಪರವಾದ ಸ್ತುತಿ ದಾಸರದಾಗಿದೆ. ಹೀಗೆ ಹುಟ್ಟಿಕೊಂಡ ಸ್ತುತಿ ಸಾಹಿತ್ಯಕ್ಕೆ ಕನ್ನಡದಲ್ಲಿ ದೀರ್ಘವಾದ ಪರಂಪರೆಯೇ ಇದೆ.

ತತ್ವಪದಗಳನ್ನು ಬರೆದವರು ಶರಣರು, ಆರೂಢರು, ಸಾಧುಗಳು, ಸಂತರು, ಪಂಡಿತ ಪಾಮರರು, ಅವಧೂತರು ಸೂಫಿಗಳು ಯಾರೇ ಆಗಿರಬಹುದು. ತತ್ವಪದಕಾರಿಗೆ ಯಾವುದೇ ಜಾತಿ ಭೇದವಿಲ್ಲ. ಮತ್ತು ಇವರು ಯಾವುದೇ ತಾತ್ವಿಕ ಚೌಕಟ್ಟನ್ನು ಅನುಸರಿಸಿದವರೂ ಅಲ್ಲ. "ನಮ್ಮ ತತ್ವಪದ ಚಿಂತನೆ ಹಿಂದೂ ಧರ್ಮದ ವಿಕೃತರೂಪ. ತತ್ವಪದಕಾರರು ಈ ಧರ್ಮದ ಸೇವಕ ವರ್ಗ, ಸಾಂಸ್ಕೃತಿಕ ಸಮಾನತೆಯನ್ನು ಸಾಧಿಸಿ ಕೊಳ್ಳುವುದರ ಮೂಲಕ ಆರ್ಥಿಕ ಸಮಾನತೆಯನ್ನು ಪಡೆಯಬಹುದೆಂದು ಹೊರಟ ಅನೇಕ ಉಪ ಸಂಸ್ಕೃತಿಗಳ ಪ್ರಯತ್ನ ಮತ್ತು ಸೋಲಿನ ಪರಿಣಾಮಗಳಲ್ಲಿ ನಮ್ಮ ತತ್ವಪದಕಾರರದು ಒಂದು ನಮ್ರ ಪ್ರಯತ್ನವಾಗಿದೆ.[೧೬]

ತತ್ವಪದಗಳ ವಸ್ತು ಅಧ್ಯಾತ್ಮವೇ ಆಗಿದೆ. ವ್ಯಕ್ತಿ ತನ್ನ ಆತ್ಮೋದ್ಧಾರ ಮಾಡಿಕೊಳ್ಳಲು ಈ ಪದಗಳನ್ನು ಹಾಡುವುದುಂಟು. ಜೀವಾತ್ಮನ ಕರೆ, ಮೊರೆ ಈ ಪದಗಳಲ್ಲಿ ಹೆಚ್ಚಾಗಿ ವ್ಯಕ್ತಗೊಂಡದ್ದುಂಟು. ಪ್ರಾರ್ಥನೆ, ಸತಿ, ಪತಿ ಭಾವ, ಜೀವದ ಅನಿತ್ಯತೆ, ಮುಕ್ತಿಯ ಹಂಬಲ ಮೌಢ್ಯಗಳ ವಿರೋಧ ಡಂಭಾಚಾರಗಳ ಖಂಡನೆ ಸಮಾಜೋದ್ಧಾರ ಕಳಕಳಿ ಸಾಮಾಜಿಕ ಪ್ರಜ್ಞೆ ಮುಂತಾದ ವಿಷಯಗಳು ಈ ಪದಗಳಲ್ಲಿ ಅಡಕವಾಗಿವೆ. ಮೇಲ್ನೋಟಕ್ಕೆ ಈ ಪದಗಳನ್ನು ಕಟ್ಟಿ ಹಾಡಿದ ತತ್ವಪದಕಾರ ಸಂಸಾರದಿಂದ ವಿಮುಖನಾದಂತೆ ಅಸಹಾಯಕನಾದಂತೆ, ಪಲಾಯನ ವಾದಿಯಂತೆ ಕಾಣಿಸುವನು. ಆದರೆ ಒಳಹೊಕ್ಕು ನೋಡಿದಾಗ ಸಂಸಾರದಲ್ಲಿದ್ದೇ ಪಾರಮಾರ್ಥ ಸಾಧನೆಗಾಗಿ ಹೋರಾಟ ನಡೆಸಿದ ಅಂತರಾತ್ಮನ ಕರೆ ಅಲ್ಲಿರುವುದು ಗಮನಕ್ಕೆ ಬರುವುದು. ಅನೇಕ ಸಮಸ್ಯೆಗಳಿಗೆ ಮುಖಾಮುಖಿಯಾಗಿ ಸ್ಪಂದಿಸುವ ಜೀವಗುಣವು ಧೈರ್ಯವು ಸಾಮಾಜಿಕ ಸಮಸ್ಯೆಗಳನ್ನು ಪರಿಹರಿಸುವ ಮತ್ತು ಎದುರಿಸುವ ಚಾಕಚಕ್ಯತೆಯೂ ತತ್ವಪದಕಾರರಲ್ಲಿರುವುದನ್ನು ಗುರುತಿಸುವೆವು. "ಈಸಬೇಕು ಇದ್ದು ಜೈಸಬೇಕು ಈ ಭವ ಸಾಗರವ" ಎಂದು ಹರಿದಾಸರು ಹೇಳುವ ಹಾಗೆ ತತ್ವಪದಕಾರರು ಸಂಸಾರದಲ್ಲಿದ್ದುಕೊಂಡೇ ಅಧ್ಯಾತ್ಮ ಸಾಧನೆಯನ್ನು ಮಾಡಿರುವರು ಹಾಗೂ ಇವರು ಬದುಕನ್ನು ಹಸನುಗೊಳಿಸಲು ಹೋರಾಡಿದ ಧೀರರು, ಪ್ರಗತಿಪರ ವಿಚಾರವಾದಿಗಳು, ವೈಚಾರಿಕ ಮತ್ತು ಜಾತ್ಯತೀತ ಮನೋಭಾವವುಳ್ಳವರಾಗಿದ್ದು, ಪರಮಾತ್ಮನ ಧ್ಯಾನ ಚಿಂತನೆ ಇವರ ಗುರಿಯಾಗಿದೆ. ಅಧಾತ್ಮ ಸಾಧನೆಯಲ್ಲಿ ತೊಡಗಿದ ಇವರು ಒಂದರ್ಥದಲ್ಲಿ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿಗಳು, ನೀರ ಮೇಲೆ ತಾವರೆಯಿದ್ದಂತೆ ಇವರ ಬದುಕು. ಸಮಾಜದಲ್ಲಿ ಸಮಾನತೆ, ಭ್ರಾತೃತ್ವಭಾವನೆ, ಮತ್ತು ಜನಸಾಮಾನ್ಯರಲ್ಲಿ ಭಕ್ತಿ ಭಾವನೆ ಮೂಡಿಸಿ ಪರಿಶುದ್ಧರನ್ನಾಗಿಸುವುದೇ ಈ ತತ್ವಪದಕಾರರ ಗುರಿಯಾಗಿದೆ.

ಈ ತತ್ವಪದ ಸಾಹಿತ್ಯ ಪರಂಪರೆಯಲ್ಲಿ ಪ್ರಮುಖವಾಗಿ ೩ ಘಟ್ಟಗಳನ್ನು ಗುರುತಿಸಬಹುದಾಗಿದೆ. ೧೨ ನೇ ಶತಮಾನದಲ್ಲಿ ಸಕಲೇಶ ಮಾದರಸ ಮುಂತಾದ ಶಿವಶರಣರಿಂದ ಪ್ರಾರಂಭಗೊಂಡ